# ಮಾನಸಿ

ಮಾರ್ಚ್ 2005 ತಿಂಗಳ ಪತ್ರಿಕೆ

**ಮಾನಸ** ತಿಂಗಳ ಪತ್ರಿಕೆ

ಸಂಪುಟ : 20

ಮಾರ್ಚ್ 2005

ಸಂಚಿಕೆ : 3

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ - ಪೋಸ್ಟ್

ಬೆಂಗಳೂರು



| | |
|---|---|
| ಸೂಚನೆ : ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಈ ಸಂಚಿಕೆಯಲ್ಲಿ......



### ಮೈಸೂರು

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ

**ವೆಂ. ವನಜ :** 2329, 12ನೇ ಮೇನ್, 2ನೇ ಹಂತ, ವಿಜಯನಗರ, ಬೆಂಗಳೂರು - 570 017.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ - ಅಂಚೆ, ಬೆಂಗಳೂರು - 560 067.

# ಸಂಪಾದಕೀಯ



'Marriages are made in heaven' ಎನ್ನುವ ಇಂಗ್ಲೀಷ್ ಉಕ್ತಿಯಿದೆ. ವಿವಾಹ ಗಂಡು - ಹೆಣ್ಣುಗಳ ನಡುವಿನ ಒಂದು ಪವಿತ್ರ ಬಂಧನ ಎನ್ನುವ ನಂಬಿಕೆ ನಮ್ಮಲ್ಲಿದೆ. ಆದರೆ ಇಂದು ವಿವಾಹ ಒಂದು ದೈವಿಕ ಜೋಡಿಯೂ ಅಲ್ಲ ಅಥವಾ ಪವಿತ್ರ ಬಂಧನವೂ ಅಲ್ಲವೆನ್ನುವಂತೆ ದಿನದಿಂದ ದಿನಕ್ಕೆ ವಿಚ್ಛೇದನಗಳ ಸಂಖ್ಯೆ ಏರುತ್ತಿದೆ. ಭಾರತದಲ್ಲಿ ಸಾವಿರ ಜನಸಂಖ್ಯೆಗೆ 70.41ರಷ್ಟು ವಿಚ್ಛೇದನಗಳಾಗುತ್ತಿವೆಯೆಂದು ವರದಿಯಾಗಿದೆ. ವಿಚ್ಛೇದನಗಳನ್ನು ತಡೆಯಲು ಕುಟುಂಬ ನ್ಯಾಯಾಲಯಗಳು ಸತತವಾಗಿ ದುಡಿಯುತ್ತಿವೆ. ಅವುಗಳ ಸಂಖ್ಯೆಯೂ ದಿನದಿಂದ ದಿನಕ್ಕೆ ಏರುತ್ತಿದೆ. 1988ರವರೆಗೆ ವಿವಾಹ ವಿಚ್ಛೇದನಕ್ಕೆ ಒಂದೇ ಒಂದು ಸಿವಿಲ್ ನ್ಯಾಯಾಲಯವಿದ್ದ ಚೆನ್ನೈನಲ್ಲಿ ಈಗ ಮೂರು ಕುಟುಂಬ ನ್ಯಾಯಾಲಯಗಳಿವೆ. ದೆಹಲಿಯಲ್ಲಿ ಅವುಗಳ ಸಂಖ್ಯೆ ಏಳಕ್ಕೇರಿದೆ.

1995ರಲ್ಲಿ ಮುಂಬೈನಲ್ಲಿ ವಿಚ್ಛೇದನದ 1446 ಪ್ರಕರಣಗಳು ಕುಟುಂಬ ನ್ಯಾಯಾಲಯಗಳಿಗೆ ಬಂದಿದ್ದರೆ 2002ನೇ ಇಸವಿಯಲ್ಲಿ ಈ ಸಂಖ್ಯೆ 1819ಕ್ಕೇರಿದೆ. ಈ ಅವಧಿಯಲ್ಲಿ ದಂಪತಿಗಳಿಬ್ಬರೂ ವಿಚ್ಛೇದನ ಬಯಸಿ ಬಂದ ಪ್ರಕರಣಗಳ ಸಂಖ್ಯೆ 530ರಿಂದ 989ಕ್ಕೇರಿತ್ತು. ಶೇಕಡ 60ರಷ್ಟು ಮಂದಿ 25-35 ವಯೋಗುಂಪಿಗೆ ಸೇರಿದವರಾಗಿದ್ದರು. ಕೇರಳದ ತಿರುವನಂತಪುರದಲ್ಲಿ 2002ರಲ್ಲಿ ವಿಚ್ಛೇದನದ ಅತ್ಯಂತ ಹೆಚ್ಚು ಪ್ರಕರಣಗಳು ಕುಟುಂಬ ನ್ಯಾಯಾಲಯಗಳಲ್ಲಿ ದಾಖಲಾಗಿದ್ದವು. ಇಲ್ಲಿ ಪ್ರತಿದಿನ ಸರಾಸರಿ ಮೂವರು ದಂಪತಿಗಳು ಪರಸ್ಪರರ ಒಪ್ಪಿಗೆ ಮೇರೆಗೆ ವಿಚ್ಛೇದನ ಪಡೆಯುತ್ತಾರೆನ್ನಲಾಗಿದೆ. 15ರಿಂದ 20 ವರ್ಷಗಳ ದೀರ್ಘಕಾಲಿಕ ದಾಂಪತ್ಯ ಜೀವನದ ನಂತರವೂ ದಂಪತಿಗಳೂ ವಿಚ್ಛೇದನ ಬಯಸಿ ಬರುತ್ತಾರೆನ್ನುವುದೊಂದು ವಿಶೇಷ ಸಂಗತಿ. ಜಂಟಿ ಕುಟುಂಬ, ವರದಕ್ಷಿಣೆ ಬೇಡಿಕೆ, ಹೊಂದಾಣಿಕೆ ಸಮಸ್ಯೆಗಳು, ದೈಹಿಕ ಮತ್ತು ಮಾನಸಿಕ ಸಮಸ್ಯೆಗಳು ವಿಚ್ಛೇದನಕ್ಕೆ ಕಾರಣವೆಂದು ತಿಳಿದುಬಂದಿದೆ.

ಕಾರಣವೇನೆ ಇದ್ದರೂ ವಿಚ್ಛೇದನ ಅನಿವಾರ್ಯವೆ ? ಇಲ್ಲಾ ಸಮಸ್ಯೆಯೊಂದಿಗೇ ಬದುಕುತ್ತಾ ಪರಸ್ಪರರ ಬದುಕನ್ನು ನರಕವಾಗಿಸಿಕೊಳ್ಳಬೇಕೇ? ಈ ಕೌಟುಂಬಿಕ ವ್ಯವಸ್ಥೆಯನ್ನು ಬೆಟ್ಟದಷ್ಟು ಸಮಸ್ಯೆಗಳಿದ್ದರೂ ಹೊಂದಾಣಿಕೆ ಸೂತ್ರವನ್ನಳವಡಿಸಿಕೊಂಡು ಭದ್ರಗೊಳಿಸಬೇಕೆ? ಅದಕ್ಕೆ ಅಷ್ಟೊಂದು ಪಾವಿತ್ರ್ಯವನ್ನು ಆರೋಪಿಸಬಹುದೆ? ಮುಂತಾದ ಪ್ರಶ್ನೆಗಳೇಳುತ್ತವೆ.

ಹಿಂದೊಮ್ಮೆ ಕಷ್ಟಸಾಧ್ಯವಾಗಿದ್ದ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾವಲಂಬನೆ ಆತ್ಮವಿಶ್ವಾಸ ಮತ್ತು ಗುರಿಯ ಸ್ಪಷ್ಟಕಲ್ಪನೆ ಮತ್ತು ಅದರ ಸಾಧನೆಯ ಛಲ ಇಂದಿನ ಮಹಿಳೆಯದಾಗಿವೆ. ಒಡಂಬಡಿಕೆಯೇ ಬದುಕಾಗಿದ್ದ ಅವಳಿಗೆ ಸಾಧನೆಯ ಮಾರ್ಗಗಳು ತೆರೆದಿವೆ. ಆದರೆ ಬದಲಾಗದ ಕೌಟುಂಬಿಕ ಹಾಗೂ ಸಾಮಾಜಿಕ ಮೌಲ್ಯ ವ್ಯವಸ್ಥೆಗಳು, ಅವುಗಳ ಪರಿಣಾಮವಾದ ಧ್ಯೇಯ - ಧೋರಣೆಗಳು, ಕಟ್ಟು - ಪಾಡುಗಳು ಅವಳ ದಾರಿಗೆ ಮುಳ್ಳಾಗಿ ಪರಿಣಮಿಸಿವೆ. ಅವಳ ಇಂದಿನ ವಿಸ್ತೃತ ಕಾರ್ಯಕ್ಷೇತ್ರಕ್ಕನುಗುಣವಾಗಿರದ, ಅನುಕೂಲಕರವಲ್ಲದ, ಹೊರೆಯೆನಿಸುವ ಕೌಟುಂಬಿಕ ಜವಾಬ್ದಾರಿಗಳು ಅವಳ ಕೊರಳಿಗೆ ಉರುಳಾಗಿವೆ ; ಅವಳ ಇನ್ನೊಂದು ಬಗೆಯ ಶೋಷಣೆಗೆ ದಾರಿ ಮಾಡಿವೆ. ಇದರಿಂದ ಪಾರಾಗುವ ದಾರಿಗಳಲ್ಲೊಂದು ವಿಚ್ಛೇದನವಾಗಿರಬಹುದೆ ? ಗಂಡನ ಸಹಾನುಭೂತಿ, ಸಹಕಾರಗಳೊಂದಿಗೆ ಸಮಾಜದ ಪುರುಷ ಪರ ದೃಷ್ಟಿಕೋನ ಬದಲಾಗಬೇಕಿದೆ ; ಅದರ ಕಟ್ಟುಪಾಡುಗಳ ಬಿಗಿತ ಸಡಿಲಗೊಳ್ಳಬೇಕಿದೆ. ಈಗಿರುವ ಪುರುಷ ಶ್ರೇಷ್ಠತೆಯ ಮೌಲ್ಯ ವ್ಯವಸ್ಥೆಗೆ ಪರ್ಯಾಯವಾದ ಸಮಾನತಾ ತತ್ವಾಧಾರಿತ ಮೌಲ್ಯವ್ಯವಸ್ಥೆಯೊಂದು ಹುಟ್ಟಿ ಬರಬೇಕಾಗಿದೆ. ಆಗ ಮಾತ್ರ ಕುಟುಂಬ ವ್ಯವಸ್ಥೆ ಬದಲಾದ ರೂಪದಲ್ಲಿ ಮುಂದುವರಿಯಲು ಸಾಧ್ಯ. ಇದ್ಯಾವುದೂ ಇಲ್ಲವಾದಲ್ಲಿ ಕುಟುಂಬದ ಅಳಿವು - ಉಳಿವುಗಳು ಅದರ ಆಧಾರ ಸ್ತಂಭವಾದ ಮಹಿಳೆಯ ನಿರ್ಧಾರಕ್ಕೆ ಬಿಟ್ಟ ವಿಷಯವೇ ಎನ್ನುವುದು ಗಂಭೀರ ಚರ್ಚೆಯ ವಿಷಯವಾಗಿದೆ.

# ದಿಟ್ಟ ಹೋರಾಟಗಾರ್ತಿ - ಚಂಪಾದೇವಿ ಶುಕ್ಲ

**ಡಿಸೆಂಬರ್ 23, 1984 ರ ಕರಾಳ ಮಧ್ಯರಾತ್ರಿಯಲ್ಲಿ ಚಂಪಾ ದೇವಿ ಶುಕ್ಲ ತಮ್ಮ ಐವರು ಚಿಕ್ಕ ಮಕ್ಕಳೊಂದಿಗೆ ರಿಸಾಲ್‌ದಾರ್ ಕಾಲೋನಿಯ ಒಂದು ಗುಡಿಸಲಿನಲ್ಲಿ ಮಲಗಿದ್ದರು. ಭೋಪಾಲ್‌ನ ಯೂನಿಯನ್ ಕಾರ್ಬೈಯಿಡ್ ಕ್ರಿಮಿನಾಶಕ ಕಾರ್ಖಾನೆಯಿಂದ ಈ ಕಾಲೋನಿ ಅರ್ಧ ಕಿಲೋ ಮೀಟರ್ ದೂರವಿತ್ತು. ಭೋಪಾಲ್‌ನ ವಿಷ ಅನಿಲ ದುರಂತದಲ್ಲಿ ಈಕೆ ತನ್ನ ಗಂಡ ಹಾಗೂ ಇಬ್ಬರು ಮಕ್ಕಳನ್ನು ಕಳೆದುಕೊಂಡರು. 2004ರಲ್ಲಿ ಆಕೆಗೆ ಹಾಗೂ ಆಕೆಯ ಸಹಪಾಠಿ ರಶೀದಾ ಬೀಗೆ ಗೋಲ್ಡ್ ಮ್ಯಾನ್ ಪರಿಸರ ಪ್ರಶಸ್ತಿ ನೀಡಲಾಯಿತು. ಈ ಪ್ರಶಸ್ತಿಯನ್ನು ಗ್ರ್ಯಾಸ್‌ರೂಟ್ ಪರಿಸರದ ಕಾರ್ಯಕರ್ತರಿಗೆ ನೀಡಲಾಗುತ್ತದೆ. ಸುಚಂದನ ಗುಪ್ತರವರಿಗೆ ಚಂಪಾದೇವಿ ಶುಕ್ಲ ನೀಡಿದ ಸಂದರ್ಶನದ ಆಯ್ದ ಭಾಗಗಳನ್ನು ಮಾನಸದ ಓದುಗರಿಗಾಗಿ ಇಲ್ಲಿ ನೀಡಲಾಗಿದೆ.**

ಚಂಪಾದೇವಿ ಶುಕ್ಲರವರಿಗೆ ಈಗ 52 ವರ್ಷ. ಈಕೆಗೆ ಮೂವರು ಗಂಡು ಮಕ್ಕಳು, ಹಾಗೂ ಇಬ್ಬರು ಹೆಣ್ಣು ಮಕ್ಕಳು. ಈಗ ಈಕೆಯ ಬಳಿ ಉಳಿದಿರುವವರು ಒಬ್ಬ ಗಂಡು ಮಗ ಹಾಗೂ ಇಬ್ಬರು ಹೆಣ್ಣು ಮಕ್ಕಳು. ಈಕೆಯ ಮಗ ರಾಜೇಶ್ ವಿಷ ಅನಿಲದಿಂದ ಬಹಳ ಗಂಭೀರವಾದ ಸಮಸ್ಯೆಗಳನ್ನು ಎದುರಿಸುತ್ತಿದ್ದನು. ದಿನ, ತಿಂಗಳುಗಳು ಆತ ನಿತ್ಯವೂ ರಕ್ತ ಉಗುಳುತ್ತಿದ್ದನು. ಹೀಗೇ ವರ್ಷಗಳೂ ಕಳೆದವು. ಅವನಿಗೆ ಹದಿನೆಂಟು ವರ್ಷವಾಗುವುದರಲ್ಲಿ ಅವನು ಸಾಕಷ್ಟು ಬಳಲಿ ಹೋಗಿದ್ದ. ಅವನಿಗೆ ಆಡಲಿಕ್ಕೆ ಆಗುತ್ತಿರಲಿಲ್ಲ. ಕೆಲಸ ಮಾಡುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಒಂದು ರಾತ್ರಿ ಆತ ವಿಷ ಸೇವಿಸಿದ. ಹಾಗೆಯೇ ಈಕೆಯ ಚಿಕ್ಕ ಮಗ ಸುನಿಲ್ ಕೂಡಾ ವಿಷ ಅನಿಲ ಸೇವಿಸಿದ ಕಾರಣದಿಂದಾಗಿ ಉಸಿರಾಟದ ತೊಂದರೆಯನ್ನು ಅನುಭವಿಸುತ್ತಿದ್ದ. ಹದಿನಾರು ವರುಷದ ನಂತರ, ಮದುವೆಯ ರಿಸೆಪ್ಷನ್ ಒಂದರ ಸಂದರ್ಭದಲ್ಲಿ ಅವನು ಸತ್ತು ಕೆಳಗೆ ಬಿದ್ದ. ಆತ ಕೆಳಗೆ ಬಿದ್ದು ಸತ್ತ ಅಷ್ಟೇ.

ಚಂಪಾದೇವಿ ಶುಕ್ಲ ಆತನ ತಲೆಯನ್ನು ತಮ್ಮ ಮಡಿಲಲ್ಲಿ ಇಟ್ಟುಕೊಂಡು ಮನೋವಿದ್ರಾವಕವಾಗಿ ಅತ್ತರು. ದೇವರು ತಮಗೆ ಕರುಣೆ ತೋರಿಸಿಯಾನು ಎಂಬುದು ಅವರ ಆಸೆಯಾಗಿತ್ತು. ಈಗ ಬದುಕಿರುವ ಇವರ ಮಕ್ಕಳೂ ಕೂಡಾ ಭೋಪಾಲ ವಿಷ ಅನಿಲ ದುರಂತದ ಬಲಿಪಶುಗಳೇ. ಇವರ ಹೆಣ್ಣು ಮಕ್ಕಳು ಕಣ್ಣು ಬಿಡದ ಕಂದಮ್ಮಗಳಿಗೇ ಜನ್ಮ ವೀಯುತ್ತಿದ್ದಾರೆ. ಕೊನೆಗೆ ಉಳಿದು ಬದುಕಿದ ಈಕೆಯ ಮೊಮ್ಮಗಳು - ಉಸಿರಾಟದ ಅಂಗಾಂಗಗಳ ತೊಂದರೆಯಿಂದಲೇ ಹುಟ್ಟಿದ್ದಾಳೆ. ಈಕೆಯ ಬಾಯಿಯಲ್ಲಿ ಒಂದು ದೊಡ್ಡ ರಂಧ್ರವಿದೆ. ಅವರು ಆಕೆಯನ್ನು ಸಪ್ನ ಎಂದು ಕರೆಯುತ್ತಾರೆ. ಆಕೆಗೆ ಈಗಾಗಲೇ ಒಂದು ಬಾರಿ ಆಪರೇಷನ್ ಆಗಿದೆ. ಆಕೆಯ ಉಸಿರಾಟವನ್ನು ಸರಿ ಮಾಡಬೇಕೆಂದರೆ ಇನ್ನು ಮೂರು ಆಪರೇಶನ್ಸ್ ಮಾಡಬೇಕಾಗಬಹುದೆಂದು ಡಾಕ್ಟರ್ ಹೇಳುತ್ತಾರೆ.

ಈ ವಿಷ ಅನಿಲದ ದುರಂತ ನಡೆದಾಗ ಭಾನುವಾರವಾಗಿತ್ತು.

**ಮಾನಸದ ಓದುಗರಿಗೆ ಅಂತರ್‌ರಾಷ್ಟ್ರೀಯ ಮಹಿಳಾ ದಿನದ ಹಾರ್ದಿಕ ಶುಭಾಶಯಗಳು**

ಆ ದಿನ ಚಂಪಾ ದೇವಿ ಶುಕ್ಲ ಮಕ್ಕಳು ಓದಿಕೊಳ್ಳುವುದರ ಬಗ್ಗೆ ಆಸಕ್ತಿ ವಹಿಸಿದ್ದರು. ಊಟದ ನಂತರ ಮಲಗಿಬಿಟ್ಟಿದ್ದರು. ಅವರ ಬಾಗಿಲನ್ನು ಯಾರೋ ಬಲವಾಗಿ ಬಡಿದ ಶಬ್ದವಾಯಿತು. ಹಾಗೆ ಬಾಗಿಲು ಬಡಿದವನು ಇವರ ಪಕ್ಕದ ಮನೆಯ ಹುಡುಗ ಸಮ್ರಜಿತ್ ಸಿಂಗ್. ಆತ ಜೋರಾಗಿ ಬಾಗಿಲು ಬಡಿಯುತ್ತಾ, ಕೂಗುತ್ತಾ ಅಲ್ಲಿಂದ ಓಡಿ ಹೋಗುವುದಕ್ಕೆ ಹೇಳುತ್ತಿದ್ದ. ಚಂಪಾದೇವಿ ಎದ್ದಾಗ ಅವರ ಕಣ್ಣು ಹಾಗೂ ಗಂಟಲಿನಲ್ಲಿ ಉರಿಯೂತ ಉಂಟಾಗಿತ್ತು. ಆಕೆಯ ಮಕ್ಕಳು ಜೋರಾಗಿ ಕೆಮ್ಮುತ್ತಿದ್ದರು. ಸಮರ್‌ಜಿತ್ ಒಂದಿಷ್ಟು ಹೊಗೆಯಲ್ಲಿಯೇ ಒಳಗೆ ಓಡಿ ಬಂದ. ನೀವು ಬದುಕಬೇಕೆಂದರೆ ಓಡಿ ಹೋಗಿ, ಕಾರ್ಖಾನೆಯಿಂದ ವಿಷ ಅನಿಲ ಹೊರಗೆ ಸೋರುತ್ತಿದೆ ಎಂದು ಆತ ಕೂಗುತ್ತಲೇ ಇದ್ದ. ಎಲ್ಲರೂ ಓಡಿ ಹೋಗುತ್ತಿದ್ದಾರೆ. ನೀವೂ ಹೋಗಿ ಎಂದು ಆತ ಕೂಗಿ ಕೂಗಿ ಹೇಳುತ್ತಿದ್ದ.

ಚಂಪಾದೇವಿ ಶುಕ್ಲ ಅವರು ಬದುಕುಳಿಯುವುದಕ್ಕಾಗಿ ಹೋರಾಟ ನಡೆಸತೊಡಗಿದರು. ಸರ್ಕಾರ ಇವರಿಗೆ ಉದ್ಯೋಗ ನೀಡುವುದಾಗಿ ಭರವಸೆ ಇತ್ತಿತ್ತು. ನಂತರ ನಿತ್ಯದ ಉಪಯೋಗಿ ಸಾಮಾಗ್ರಿ ತಯಾರಿಸುವ ಒಂದು ಯೂನಿಟ್ ಪ್ರಾರಂಭಿಸಿತು. ಮೂರು ತಿಂಗಳ ತರಬೇತಿಯ ನಂತರ ಅವರನ್ನು ತೆಗೆದುಹಾಕಿದರು. ಕೆಲವರ ಗಂಡಂದಿರು ಸತ್ತು ಹೋಗಿದ್ದರು. ಅಥವಾ ಸಾಯುವ ಸ್ಥಿತಿಯಲ್ಲಿ ಇದ್ದರು. ಅನೇಕ ಜನರ ಜೊತೆಗೆ ಚಂಪಾದೇವಿ ಶುಕ್ಲ ಮುಖ್ಯಮಂತ್ರಿಗಳ ಆಫೀಸಿಗೆ ಹೋದರು. ಅವರು ಭೋಪಾಲ್ ವಿಷ ಅನಿಲ ಪೀಡಿತ ಮಹಿಳಾ ಸ್ಟೇಷನರಿ ಕರ್ಮಚಾರಿ ಸಂಘ ಎಂಬ ಬ್ಯಾನರ್‌ನಲ್ಲಿ ಸಂಘಟಿತರಾಗಿ ಹೋರಾಟ ನಡೆಸತೊಡಗಿದರು. ಅಲ್ಲಿ ಕೊಡಲಾಗುತ್ತಿದ್ದ 6 ರೂಪಾಯಿ ದಿನಗೂಲಿಯನ್ನು ಅವರು ತಿರಸ್ಕರಿಸಿಯೂ ಸಹ ದಿನ ನಿತ್ಯ ಕೆಲಸ ಮಾಡುತ್ತಿದ್ದರು. ಎರಡೂವರೆ ವರ್ಷಗಳ ನಂತರ ಅವರ ಯೂನಿಟ್‌ನಲ್ಲಿ 2.5 ಲಕ್ಷ ಲಾಭ ಬಂದಿತ್ತು. ಅರ್ಜುನ್ ಸಿಂಗ್ ಮತ್ತೆ ಮುಖ್ಯಮಂತ್ರಿಯಾಗಿ ಆರಿಸಿ ಬಂದಿದ್ದರು. ಬಂದಿರುವ ಲಾಭದಿಂದ ಸರಿಯಾದ ಸಂಬಳ ಕೊಡುವಂತೆ ಮಹಿಳಾ ಸಂಘಟನೆ ಒತ್ತಾಯಿಸಿದ್ದಲ್ಲದೇ ಕಾನೂನು ಬದ್ಧ ಸ್ಥಾನ - ಮಾನ ಕೊಡುವಂತೆ ಸಹ ಒತ್ತಾಯಿಸಿದರು.

ಜೂನ್ 1, 1989ರಂದು ಭೋಪಾಲ್ ವಿಷ ಅನಿಲ ಪೀಡಿತ ಮಹಿಳಾ ಸ್ಟೇಷನರಿ ಕರ್ಮಚಾರಿ ಸಂಘ ದೆಹಲಿಗೆ ಹೋಗುವುದಕ್ಕೆ ನಿರ್ಧರಿಸಿದರು. ಅಲ್ಲಿ ಪ್ರಧಾನ ಮಂತ್ರಿಯನ್ನು ಭೇಟಿಯಾಗುವುದು ಅವರ ಉದ್ದೇಶವಾಗಿತ್ತು. ಅವರು ಮಕ್ಕಳನ್ನು ಕೈಗಳಲ್ಲಿ ಎತ್ತಿಕೊಂಡು ಒಂದು ತಿಂಗಳ ಮೂರು ದಿನ ನಡೆದು ಅವರು ದೆಹಲಿಯಲ್ಲಿ ಸೇರಿದ್ದರು. ಇಂಡಿಯಾ ಗೇಟ್ ಬಳಿ ಕಾಯುತ್ತಾ ಪ್ರಧಾನ ಮಂತ್ರಿಗಳ ಜೊತೆ ಭೇಟಿಗೆ ಎದುರು ನೋಡ ತೊಡಗಿದರು. ಒಂದು ವಾರದ ನಂತರ ಯೂನಿಯನ್ ಮಂತ್ರಿ ಸುರೇಶ್ ಪಚಾರಿ ಇವರನ್ನು ಭೇಟಿಯಾಗಲು ಬಂದರು. ನಂತರದ ಎರಡು ದಿನಗಳಲ್ಲಿ ಪ್ರಧಾನ ಮಂತ್ರಿಯವರನ್ನು ಭೇಟಿಯಾಗುವುದು ಸಾಧ್ಯವೇ ಇಲ್ಲ ಎಂದು ಅವರು ಹೇಳಿದರು. ವಾರದ ಎರಡು ದಿನಗಳನ್ನು ಪ್ರಧಾನಮಂತ್ರಿಯವರು ಕುಟುಂಬದ ಜೊತೆ ಕಳೆಯುವುದಾಗಿಯೂ, ಸೋಮವಾರ ಅವರು ಪ್ಯಾರಿಸ್‌ಗೆ ಹೋಗುವುದಾಗಿಯೂ ಹೇಳಲಾಯಿತು. ಮೋತಿಲಾಲ್‌ರವರು ಇವರನ್ನು ಭೋಪಾಲ್‌ಗೆ ವಾಪಸ್ಸು ಹೋಗುವಂತೆ ಬೇಡಿಕೊಂಡರು. ಹಾಗೂ ಭೋಪಾಲ್‌ಗೆ ಬಂದು ಅಲ್ಲಿ ಇವರನ್ನು ಭೇಟಿಯಾಗುವುದಾಗಿ ವಚನವಿತ್ತರು. ಆದರೆ ಚಂಪಾದೇವಿ ಶುಕ್ಲ ಹಾಗೂ ಇತರರು ಮೋತಿಲಾಲ್ ವರಾರವರಿಗೋಸ್ಕರ ಕಾಯುತ್ತಲೇ ಇದ್ದಾರೆ.

ಫೆಬ್ರವರಿ 2001 ರಲ್ಲಿ ಅಮೇರಿಕಾದ ಮಲ್ಟಿನ್ಯಾಶನಲ್ ಕಂಪನಿಯಾದ ಡಾವ್ ಕೆಮಿಕಲ್ಸ್ ಭಾರತದ ಯೂನಿಯನ್ ಕಾರ್ಬಾಯಿಡನ್ನು ಕೈಗೆ ತೆಗೆದುಕೊಂಡಿತು. ಹೀಗೆ ಕೈಗೆ ತೆಗೆದುಕೊಳ್ಳುವುದರ ಮೂಲಕ ಡಾವ್‌ಕೆಮಿಕಲ್ಸ್ ಭೋಪಾಲ್‌ನಲ್ಲಿ ವಿಷ ಅನಿಲದ ಕಾರ್ಖಾನೆಯಿಂದ ಹೊರ ಹೊಮ್ಮುವ ವಿಷಪೂರಿತ ಪದಾರ್ಥಗಳಿಂದಾಗಿ ಉಂಟಾಗುತ್ತಿರುವ ನೀರಿನ, ಹಾಗೂ ಪರಿಸರದ ಕಲ್ಮಶವನ್ನು ಸ್ವಚ್ಛಗೊಳಿಸುವ ನೈತಿಕ ಜವಾಬ್ದಾರಿ ಹೊಂದಿದೆ ಎಂದು ಮಹಿಳಾ ಸ್ಟೇಷನರಿ ಕರ್ಮಚಾರಿ ಸಂಘ ವಾದಿಸಿತು. ಅಕ್ಟೋಬರ್ 17 ರಂದು ಸ್ವಿಜ್ಜರ್ ಲ್ಯಾಂಡ್ ನ ಹಾರ್‌ಗನ್‌ಗೆ ಚಂಪಾದೇವಿ ಶುಕ್ಲಾ ಹಾಗೂ ಇತರರು ಹೋಗಿದ್ದರು. ನಾಲ್ಕು ದಿನಗಳ ಕಾಲ ಡಾವ್ ಆಫೀಸಿನ ಹೊರಗಿನ ಬೀದಿಯಲ್ಲಿ ಕುಳಿತು ಇವರು ಧರಣಿ ಮಾಡಿದರು. ಸಿಇಓ ಲೂಸಿಯಾನೋ

ರೆಸ್‌ಪಿನಿ ಇವರನ್ನು ಮಾತನಾಡಲು ಒಳಗೆ ಕರೆದರು. ಚಂಪಾದೇವಿ ಶುಕ್ಲ ಪೊರಕೆಯೊಂದಿಗೆ ಒಳಗೆ ಹೋದರು. ಇವರ ಕೈಯಲ್ಲಿ ಇರುವ ಪೊರಕೆ ನೋಡಿ ರೆಸ್‌ಪಿನಿ ಕೊಠಡಿಯ ಇನ್ನೊಂದು ಪಕ್ಕಕ್ಕೆ ಹೋಗಲು ಯತ್ನಿಸಿದರು. ಚಂಪಾದೇವಿ ಶುಕ್ಲ "ಭಾರತದಲ್ಲಿ ಕಸ, ಕೊಳಚೆ, ಕೊಳಕುಗಳನ್ನು ಸ್ವಚ್ಛ ಮಾಡಲು ಹೆಂಗಸರು ಪೊರಕೆ ಬಳಸುತ್ತಾರೆ. ನೀವು ಭೋಪಾಲ್‌ನ್ನು ಸ್ವಚ್ಛಗೊಳಿಸದಿದ್ದರೆ, ನಾವು ನಮ್ಮ ಪೊರಕೆಗಳಿಂದ ಡಾವ್ ಕೆಮಿಕಲ್ಸ್ ಕಂಪನಿಯನ್ನು ಭಾರತದಿಂದ ಓಡಿಸುತ್ತೇವೆ ಹಾಗೂ ಪ್ರಪಂಚದಿಂದ ಓಡಿಸುತ್ತೇವೆ". ರೆಸ್‌ಪಿನಿ "ಡಾವ್ ಕೆಮಿಕಲ್ಸ್ ಯಾವ ರೀತಿಯ ಕಾನೂನು ಬದ್ಧ ಹೊಣೆಗಾರಿಕೆಯನ್ನು ಭೋಪಾಲ್ ದುರಂತದಲ್ಲಿ ಹೊಂದಿಲ್ಲ. ಆದರೆ ಮಾನವೀಯ ಅನುಕಂಪದಿಂದ ಸಹಾಯ ಮಾಡಬಹುದು" ಎಂದರು. ಚಂಪಾದೇವಿ ಶುಕ್ಲ ತಾವು ಬೇಡುವುದಕ್ಕೋಸ್ಕರ ಅಲ್ಲಿಗೆ ಬಂದಿಲ್ಲ ಎಂದರು. ವಿಷಾನಿಲದಿಂದ ನೊಂದವರ ಹಕ್ಕುಗಳನ್ನು ಕೇಳಲು ಬಂದಿದ್ದೇನೆ ಎಂದರು.

ಭೋಪಾಲ್ ವಿಷ ಅನಿಲ ಪೀಡಿತ ಮಹಿಳಾ ಸ್ಟೇಷನರಿ ಕರ್ಮಚಾರಿ ಸಂಘ ಅನೇಕ ಬೇಡಿಕೆಗಳನ್ನು ಮಂಡಿಸಿದೆ.

ಡಾವ್ ಕೆಮಿಕಲ್ಸ್ ವಾಕಿನ್ ಆ್ಯಂಡರ್‌ರವರನ್ನು ಭಾರತಕ್ಕೆ ಕರೆತರಬೇಕು ಈ ವಾಕಿನ್ ಆ್ಯಂಡರ್‌ನ ಯೂನಿಯನ್ ಕಾರ್ಬೈಡ್ ಕಾರ್ಪೊರೇಷನ್ನಿನ ಆಗಿನ ಛೇರ್‌ಮನ್ ಆಗಿದ್ದವನು ಹಾಗೂ ವಿಷ ಅನಿಲದ ದುರಂತದಲ್ಲಿ ಮುಖ್ಯ ಅಪರಾಧಿ. ಈತನನ್ನು ಭಾರತಕ್ಕೆ ಕರೆತರುವ ನೈತಿಕ ಜವಾಬ್ದಾರಿ ಡಾವ್ ಕೆಮಿಕಲ್ಸ್‌ದು. ಡಾವ್ ಕಂಪನಿ ವಿಷ ಅನಿಲದಲ್ಲಿ ನೊಂದವರ ಮಕ್ಕಳ ಹಾಗೂ ಅವರ ಎರಡು ತಲೆಮಾರಿನ ಔಷಧೋಪಚಾರದ ಖರ್ಚು/ ವೆಚ್ಚ ವಹಿಸಿಕೊಳ್ಳಬೇಕು. ಈ ವಿಷ ಅನಿಲದಿಂದ ನೊಂದವರ ಕುಟುಂಬದಲ್ಲಿ ಅನೇಕರು ಟಿ.ಬಿ.ಯಿಂದ ನರಳುತ್ತಿದ್ದಾರೆ. ಡಾವ್ ಕಂಪನಿ - ಯೂನಿಯನ್ ಕಾರ್ಬೈಡ್ ಕಾರ್ಖಾನೆಯ ಸುತ್ತ - ಮುತ್ತ ಇರುವ ಲೆಥಲ್ ಕೆಮಿಕಲ್ಸ್‌ನ್ನು ತಕ್ಷಣವೇ ತೆಗೆಯಬೇಕು. ಭೋಪಾಲಿನ ಜನರು ವಿಷಪೂರಿತ ನೀರನ್ನು ಸೇವಿಸುತ್ತಿದ್ದಾರೆ. ವಿಷಪೂರಿತ ನೀರು, ವಸ್ತುಗಳು ನೆಲದೊಳಕ್ಕೆ ಇಳಿಯುತ್ತಿದೆ. ಈ ವಿಷವನ್ನು ತೆಗೆಯುವವರು ಯಾರು?

ಕೃಪೆ : ದಿ ಟೈಮ್ಸ್ ಆಫ್ ಇಂಡಿಯಾ,
ಸುಚಂದನ್ ಗುಪ್ತ.

# ಲೈವ್ ಬ್ಯಾಂಡ್, ಕ್ರೈಂ ಸ್ಟೋರಿ - ಕುರಿತು

- ಹೆಚ್. ಎಸ್. ಚಂಪಾವತಿ

ದಿನಾಂಕ 18 -1 -2005ರಂದು ಲೈವ್ ಬ್ಯಾಂಡ್, ಕ್ರೈಂ ಧಾರವಾಹಿ, ಸ್ಕಿಲ್‌ಗೇಮ್, ಒಂದಂಕಿ ಲಾಟರಿ, ಮಟ್ಕಾ ಹಾಗೂ ಫಿಜ್ಜಾ ಸಂಸ್ಕೃತಿ-ಇವುಗಳ ದುಷ್ಪರಿಣಾಮ ಕುರಿತಾದ ಒಂದು ಸಭೆ ಗಾಂಧೀಭವನದಲ್ಲಿ ನಡೆಯಿತು. ಈ ಸಭೆಯನ್ನು ಈ ಮಣ್ಣಿನ ಸಂಸ್ಕೃತಿ,ಕಲೆಗಳ ಬಗ್ಗೆ ಆಗಾಧವಾದ ಕಾಳಜಿ ಹೊಂದಿರುವ ಶ್ರೀಯುತ ಸಿ.ಜಿ. ಕೃಷ್ಣಮೂರ್ತಿ ಹಾಗೂ ಅಗ್ರಹಾರ ಕೃಷ್ಣ ಮೂರ್ತಿಯವರು ಸಂಘಟಿಸಿದ್ದರು. ಗಾಂಧೀಭವನದಲ್ಲಿ ನಡೆದ ಈ ಸಮಾರಂಭದಲ್ಲಿ ಸುಮಾರು ಮಂದಿ ಕಲಾವಿದರು, ಸಾಹಿತಿಗಳು, ಹೋರಾಟಗಾರರು ಹಾಗೂ ನೆಲದ ಸಂಸ್ಕೃತಿಯ ಬಗ್ಗೆ ಕಾಳಜಿಯುಕ್ತ ಆಸಕ್ತರು ಭಾಗವಹಿಸಿದ್ದರು.

ಶ್ರೀಮಾನ್ ಸಿ.ಜಿ.ಕೆ. ಯವರು ಮಾತನಾಡುತ್ತಾ ಯುವ ಪೀಳಿಗೆ - ಅಧಃಪತನದತ್ತ ಸಾಗುವುದನ್ನು, ಲೈವ್ ಬ್ಯಾಂಡ್, ಕ್ರೈಂಸ್ಟೋರಿಗಳು ಬೀರುತ್ತಿರುವ ಪ್ರಭಾವವನ್ನು ಕುರಿತು ಮಾತನಾಡಿದರು.

ಅಗ್ರಹಾರ ಕೃಷ್ಣಮೂರ್ತಿಯವರು ಮಾತನಾಡುತ್ತಾ ಕರ್ನಾಟಕದಲ್ಲಿ ಕಲ್ಕತ್ತಾ ನಗರದಂತಹ ಸಂಸ್ಕೃತಿ ಮೂಡಿಬರಬೇಕು ಎನ್ನುವ ಆಶಯ ವ್ಯಕ್ತ ಪಡಿಸಿದರು. ಅಲ್ಲಿ ಪುಸ್ತಕಗಳ ಮೇಳ ನಡೆಯುತ್ತದೆ. ಸಾವಿರಾರು ಜನ ಈ ಪುಸ್ತಕ ಸಮ್ಮೇಳನದಲ್ಲಿ ಭಾಗವಹಿಸುತ್ತಾರೆ. ಆದರೆ ಕರ್ನಾಟಕದಲ್ಲಿ ಹೀಗೆ ಪುಸ್ತಕಗಳ ಮೇಳ ನಡೆಸುವಂತಹ, ನಡೆಸಿದರೂ ಪ್ರತಿಕ್ರಿಯೆ ಕಂಡು ಬರದಂತಹ ವಾತಾವರಣದ ಬಗ್ಗೆ ವಿಷಾದ ವ್ಯಕ್ತಪಡಿಸಿದರು. ಲೈವ್‌ಬ್ಯಾಂಡ್, ಕ್ರೈಂ ಧಾರಾವಾಹಿಗಳು - ಹಣದ ಹಿನ್ನೆಲೆಯಲ್ಲಿ ಹೀಗೆ ಹಿಂಸೆಯನ್ನು ವೈಭವೀಕರಿಸ-ತೊಡಗಿವೆ ಎಂದು ಹೇಳಿದ ಅವರು ಇಂತಹ ಆತಂಕಕಾರಿ ಸಾಂಸ್ಕೃತಿಕ ಸನ್ನಿವೇಶದಲ್ಲಿ ನಾವುಗಳು ಒಂದಾಗಿ ಏನು

ಮಾಡಬಹುದೆಂಬುದನ್ನು ಚರ್ಚಿಸಲು ಈ ಸಭೆ ಕರೆದಿದ್ದೇವೆ ಎಂದರು. ಹಾಗೂ ಏನು ಮಾಡಬಹುದೆಂಬುದರ ಬಗ್ಗೆ ಸಲಹೆ - ಸಹಕಾರ ನೀಡಬೇಕೆಂದು ಸಭೆಯ ಉದ್ದೇಶಗಳನ್ನು ಮಂಡಿಸಿದರು.

ನಂತರದಲ್ಲಿ ಎಲ್. ಹನುಮಂತಯ್ಯ, ಅಗ್ನಿ ಪತ್ರಿಕೆಯ ಸಂಪಾದಕ ಶ್ರೀಧರ್, ವಾಸು, ಡಾ. ಲೀಲಾಸಂಪಿಗೆ, ದ್ವಾರಕಾನಾಥ್, ಮಾನಸ ಸಂಘಟನೆ - ಇನ್ನೂ ಅನೇಕ ಹೋರಾಟಗಾರರು ಹಾಗೂ ಸಾಹಿತಿಗಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡರು.

ಈ ಸಭೆಯಲ್ಲಿ ಒಟ್ಟಾರೆಯಾಗಿ ಮೂಡಿ ಬಂದ ಅಭಿಪ್ರಾಯ ಸಲಹೆಗಳು ಈ ರೀತಿ ಇದ್ದವು.

- 'ಕೈಂಸ್ಪೋರಿ' ಹಿಂಸೆಯನ್ನು ವೈಭವೀಕರಿಸುವುದರ ಮೂಲಕ ಜನರಲ್ಲಿ ಒಂದು ರೀತಿಯ ಭಯ, ಆತಂಕದ ವಾತಾವರಣ ಹುಟ್ಟು ಹಾಕುತ್ತಿದೆ.
- ಲೈವ್‌ಬ್ಯಾಂಡ್ - ಸಂಸ್ಕೃತಿ ಇತ್ತೀಚೆಗೆ ಎಲ್ಲಾ ಬಡಾವಣೆಗಳಲ್ಲಿ ಹುಟ್ಟಿಕೊಳ್ಳುತ್ತಿರುವ ಸಂಸ್ಕೃತಿಯಾಗ ತೊಡಗಿದೆ. ಇಲ್ಲಿ ಹೆಣ್ಣು ಮಕ್ಕಳನ್ನು ಕುಣಿತಕ್ಕೆ - ಸೂಳೆಗಾರಿಕೆಗೆ ಎರಡಕ್ಕೂ ಬಳಸಿಕೊಳ್ಳಲಾಗುತ್ತಿದೆ. ಹಾಗೆಯೇ ಇಲ್ಲಿ ಎಲ್ಲಾ ರೀತಿಯ ಅವ್ಯವಹಾರಗಳಿಗೂ ಜಾಗ ಮಾಡಿಕೊಡಲಾಗಿದೆ. ಶಾಸಕರೂ ಸೇರಿದಂತೆ ಹಲವರು ಈ ಲೈವ್‌ಬ್ಯಾಂಡ್ ನಡೆಸುವುದರಿಂದ, ಇಲ್ಲಿ ಪೋಲೀಸರೂ ಶಾಮೀಲಾಗಿರುತ್ತಾರೆ. ಪೋಲೀಸರು ರೈಡ್ ಮಾಡುವ ನಾಟಕಗಳನ್ನು ದುಡ್ಡಿಗಾಗಿ ಮಾಡುತ್ತಾರೆ ಅಷ್ಟೇ. ಇವೆಲ್ಲದರ ಹಿಂದೆ ದುಡ್ಡು ಮಾಡುವ ಪ್ರವೃತ್ತಿ ಎದ್ದು ಕಾಣುತ್ತದೆ. ಈ ಅಭಿಪ್ರಾಯಗಳ ಜೊತೆಗೆ ಹೋರಾಟ ರೂಪಿಸುವ ಹಿನ್ನೆಲೆಯಲ್ಲಿ ಹಲವಾರು ಸಲಹೆಗಳು ಮೂಡಿ ಬಂದವು. ಮಾಧ್ಯಮಗಳು, ಸಾಹಿತಿಗಳು, ಕಲಾವಿದರು ಎಲ್ಲರೂ ಬೀದಿಗಿಳಿದು ಹೋರಾಟ ನಡೆಸುವಂತೆ ಒಂದು ಮಾದರಿ ರೂಪಿಸುವುದು.
- ಶಾಲಾ, ಕಾಲೇಜುಗಳಲ್ಲಿ ವಿದ್ಯಾರ್ಥಿ- ವಿದ್ಯಾರ್ಥಿನಿಯರಿಗೆ ಈ ಬಗ್ಗೆ ಮಾಹಿತಿ ನೀಡಿ, ಅವರನ್ನು ಹೋರಾಟದ ಮುಂಚೂಣಿಗ ತರುವುದು.
- ಪ್ರಗತಿಪರ ಸಂಘಟನೆಗಳು ಈ ವಿಚಾರಗಳನ್ನು ತೆಗೆದುಕೊಂಡು ಒಟ್ಟಾಗಿ ಹೋರಾಟ ನಡೆಸುವುದು.
- ಲೈವ್‌ಬ್ಯಾಂಡ್ ಕಾನೂನು ಬದ್ಧವಾಗಿ ನಡೆಸಿ ಎನ್ನುವ ಬೇಡಿಕೆ ಇತ್ತು ಧರಣಿ ಮಾಡಿದರೆ ಅವು ತಾನಾಗಿಯೇ ಮುಚ್ಚಿ ಹೋಗುತ್ತವೆ. ಅಂದರೆ ರಾತ್ರಿ 11 ಘಂಟೆಯ ಮೇಲೆ ನಡೆಸಬಾರದು. ಮದ್ಯ ಸರಬರಾಜು ಮಾಡಬಾರದು. ಹೀಗೆ ಬೇಡಿಕೆಯೊಂದಿಗೆ ಧರಣಿ, ಹೋರಾಟ ಮಾಡಿದರೆ ಅವರು ಅನಿವಾರ್ಯವಾಗಿ ಲೈವ್‌ಬ್ಯಾಂಡ್ ಮುಚ್ಚಬೇಕಾಗುತ್ತದೆ ಎಂದು ಅಗ್ನಿ ಪತ್ರಿಕೆಯ ಶ್ರೀಧರ್‌ರವರು ಅಭಿಪ್ರಾಯಪಟ್ಟರು.
- ಲೈವ್‌ಬ್ಯಾಂಡ್ ಮುಚ್ಚಿಸುವ ಪೂರ್ವಭಾವಿಯಾಗಿ ಅಲ್ಲಿರುವ ಹೆಣ್ಣು ಮಕ್ಕಳ ಜೀವನದ ಪರ್ಯಾಯಗಳನ್ನು ಸಹ ಯೋಚಿಸಬೇಕು ಎಂಬ ಸಲಹೆಗಳೂ ಮೂಡಿಬಂದವು. ಈ ಬಗ್ಗೆ ಹೋರಾಟ ನಡೆದರೆ, ಸಂಘಟಿಸಿದರೆ ಭಾಗವಹಿಸುವುದಾಗಿ ಅನೇಕರು ಪ್ರತಿಕ್ರಿಯೆ ತೋರಿದರು.

ಈ ಸಭೆಯಲ್ಲಿ ಲೇಖಕರಾದ ಶ್ರೀಯುತ ಅನಂತಮೂರ್ತಿಯವರು ಭಾಗವಹಿಸಬೇಕಿತ್ತು. ಅವರ ಅನುಪಸ್ಥಿತಿಯಲ್ಲಿ ಅವರು ಸಭೆಗೆ ಕಳುಹಿಸಿದ ಪತ್ರದ ನಕಲನ್ನು ಎಲ್ಲರಿಗೂ ಹಂಚಲಾಯಿತು. ಶ್ರೀಯುತ ಅನಂತಮೂರ್ತಿಯವರ ಪತ್ರವನ್ನು ಈ ವರದಿಯೊಂದಿಗೆ ಪ್ರಕಟಿಸಿದ್ದೇವೆ.



**ಶ್ರೀಯುತ ಅನಂತಮೂರ್ತಿಯವರ ಪತ್ರದ ನಕಲು :**

ಹತ್ತೊಂಬತ್ತನೇ ಶತಮಾನದಲ್ಲಿ ಅತಿರೋಚಕವಾದ ಕಥೆಗಳನ್ನು ಲೇಖಕರು ಜರ್ಮನಿಯಲ್ಲಿ ಬರೆಯಲು ತೊಡಗಿದರು. ಈ ರೋಚಕ ಕಥೆಗಳು ಬಹು ಜನಪ್ರಿಯವಾಗಿಬಿಟ್ಟವು. ಇಂಥ ಕಥೆಗಳನ್ನು ಓದುವ ಜನ ಇನ್ನೊಂದು ಕಥೆಯನ್ನು ಓದುವಾಗ ತಾವು ಹಿಂದೆ ಓದಿದ್ದಕ್ಕಿಂತ ಇದು ಹೆಚ್ಚು ರೋಚಕವಾಗಿರಬೇಕೆಂದು ಬಯಸುವುದು ಸಹಜವೆ. ಹೀಗೆ ರೋಚಕತೆಯಲ್ಲಿ ಸ್ಪರ್ಧೆ ನಡೆಯತೊಡಗಿದರೆ ಲೇಖಕ ಏನನ್ನಾದರೂ ಬರೆಯಲು ಹೇಸುವುದಿಲ್ಲ. ಲೇಖಕ ತಾಯ್ಗಂಡನಾಗುವುದು ಹೀಗೆ.

ಮನುಷ್ಯ ತನ್ನ ಸಹಜವಾದ ಅನುಭವದಲ್ಲಿ ಅರಳಿದ ಹೂವಿನಲ್ಲಿ ಜಗತ್ತಿನ ಸೃಷ್ಟಿಯ ಸೋಜಿಗವನ್ನು ಕಾಣಬಲ್ಲ ಶಕ್ತಿಯನ್ನು ಪಡೆದಿರುತ್ತಾನೆ. ಹೀಗೆ ದೈನಿಕ ಜೀವನದ ಸಹಜಗತಿಯಲ್ಲೇ ಇರುವ ಸೌಂದರ್ಯಕ್ಕೆ ಮನುಷ್ಯ ರೋಚಕದ ರುಚಿ ಹತ್ತಿದೊಡನೆಯೇ ವಿಮುಖನಾಗುತ್ತಾನೆ.

ಯಾವುದಕ್ಕೂ ಸ್ಪಂದಿಸಲಾರದಂತೆ ಮನಸ್ಸು ಜಡವಾಗುತ್ತದೆ. ಜಡವಾದ ಮನಸ್ಸು ಗೊಡ್ಡಾಗುತ್ತದೆ. ಗೊಡ್ಡಾದ ಮನಸ್ಸು ಕ್ರೂರವಾಗುತ್ತದೆ. 19ನೇ ಶತಮಾನದಲ್ಲೇ ಯುರೋಪಿನಲ್ಲಿ ಈ ಬಗೆಯ ಕ್ರೌರ್ಯದ ರುಚಿಗಳನ್ನು ಬದಲಾಯಿಸುವ ಮಹತ್ವದ ಕೆಲಸವನ್ನೂ ದೊಡ್ಡ ಕಲಾವಿದರು ಮಾಡಿದ್ದಾರೆ. ಇಂಗ್ಲೆಂಡಿನಲ್ಲಿ ವರ್ಡ್ಸ್‌ವರ್ತನ ಕಾವ್ಯ, ಜರ್ಮನಿಯಲ್ಲಿ ಗಯಟೆಯ ಬರವಣಿಗೆ, ರಷ್ಯಾದಲ್ಲಿ - 19ನೇ ಶತಮಾನದ ಕೊನೆಯಲ್ಲಿ ಮತ್ತು 20ರ ಆದಿಯಲ್ಲಿ - ಹುಟ್ಟಿಕೊಂಡ ಟಾಲ್‌ಸ್ಟಾಯ್ ಮತ್ತು ನಮ್ಮ ದೇಶದಲ್ಲಿ ಠಾಕೂರರು, ಪ್ರೇಮಚಂದ್ರರು, ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತರು - ಇವರೆಲ್ಲರು ಬದುಕಿನ ದೈನಿಕಕ್ಕೆ ಮನುಷ್ಯ ಹಸನಾಗುವಂತೆ ಮಾಡಿದ ಮಹಾನುಭಾವರು.

ಬರವಣಿಗೆಯಲ್ಲಿ ರೋಚಕತೆ ಅಪಾಯಕಾರಿಯಾದರೆ, ದೃಶ್ಯ ಮಾಧ್ಯಮದಲ್ಲಂತೂ ಅದು ಅತಿ ಅಪಾಯಕಾರಿ. ಓದಿದ್ದನ್ನು ನಾವು ಅನುಮಾನಿಸುವುದು ಸಾಧ್ಯ. ನೋಡಿದ್ದನ್ನು ನಾವು ನಂಬುತ್ತೇವೆ. ನಂಬಿಸುವಂತೆ ಏನನ್ನಾದರೂ ಕಾಣಿಸಬಲ್ಲ ವಂಚಕರು ರಾಕ್ಷಸ ಬುದ್ಧಿಯುಳ್ಳವರಾಗಿರುತ್ತಾರೆ. ಟಿ.ವಿ. ಮಾಧ್ಯಮದಲ್ಲಿ ತಮ್ಮ ಸಾಮಾನುಗಳನ್ನು ಮಾರಲು ಜಾಹೀರಾತು ಕೊಟ್ಟು ಪೋಷಿಸುವ ಆಸೆ ಬರುಕ ವ್ಯಾಪಾರಿಗಳೂ ಇರುತ್ತಾರೆ. ಇವರ ಒಕ್ಕೂಟದಿಂದಾಗಿ ನಮ್ಮ ಮನಸ್ಸು, ನಮ್ಮ ರುಚಿ, ನಮ್ಮ ಸಂವೇದನೆ ಎಲ್ಲವೂ ಹಾಳಾಗುತ್ತವೆ. ನಾವು ಹೊರಗೆ ಹೋಗಿ ನೋಡುವ ಸಿನಿಮಾಗಳೂ ಇವು ಅಲ್ಲ. ನಾವು ಪ್ರಯತ್ನಿಸಿ ಆಯ್ದದ್ದಲ್ಲ. ಕೂತಾಗ ನಮ್ಮ ಕಣ್ಣುಗಳನ್ನು ನಮ್ಮ ಮನೆಯಲ್ಲೆ ಸೆಳೆಯುವ ರೋಚಕ ಚಿತ್ರಗಳು ಇವು. ಇಂಥ ಅಮಾನುಷ ಕೊಲೆ ಕ್ರೌರ್ಯಗಳನ್ನು ಪ್ರತಿನಿತ್ಯ ನೋಡುವವರು ರಾಮಾಯಣ ಮಹಾಭಾರತಗಳನ್ನು ಓದಿದರೆ ಬೋರಾಗುವವರು ಖಂಡಿತ ಶೇಕ್ಸ್‌ಫಿಯರ್ ಅಥವಾ ಈಸ್ಖಿಲಸ್ ಅಥವಾ ಸೋಫೋಕ್ಲಿಸರ ಅತ್ಯಂತ ಪ್ರಬುದ್ಧವಾದ ಹಿಂಸೆಯ ದರ್ಶನವನ್ನು ಮಾಡಿ ಶುದ್ಧವಾಗುವ ವ್ಯವಧಾನ ಉಳ್ಳವರೂ ಆಗಿರುವುದಿಲ್ಲ.

ನಮ್ಮನ್ನು ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ದೈನಿಕದ ಗೃಹಸ್ಥ ಜೀವನದಲ್ಲಿ ನಿರ್ವಿಣ್ಣರಾಗಿ ಮಾಡುವ ಈ ಸಂಚನ್ನು ನಾವೆಲ್ಲರೂ ಪ್ರತಿಭಟಿಸಬೇಕು. ನಮ್ಮ ಮನಸ್ಸುಗಳು ಜೀವನದ ಅನಿವಾರ್ಯ ಆಘಾತಗಳಿಗೆ, ಹಿಂಸೆಗಳಿಗೆ, ಕ್ರೌರ್ಯಕ್ಕೆ ಎದುರಾಗುವ ಶಕ್ತಿಯನ್ನು ನಾವು ಬೆಳೆಸಿಕೊಳ್ಳಬೇಕು. ಅಬ್ಬರದ ರೋಚಕತೆಗೆ ಸ್ಪಂದಿಸುವವರು ಸತ್ಯದ ಪಿಸುಮಾತಿಗೆ ಸ್ಪಂದಿಸಲಾರರು. ಪಿಸು ಮಾತುಗಳೂ ಕೇಳುವ ಮೌನ ನಮಗೆ ನಮ್ಮ ದಿನನಿತ್ಯದ ಜೀವನದಲ್ಲಿ ಒದಗುವಂತಹದು. ಇಲ್ಲವಾದರೆ ನಮ್ಮ ಇಡೀ ಸಂಸ್ಕೃತಿ ಮತ್ತು ನಮ್ಮ ಭಾಷೆ ಸಾಯುತ್ತದೆ.

ಸಹಿ/-

- ಯು. ಆರ್. ಅನಂತಮೂರ್ತಿ

## ಅನಿಸಿಕೆ

ಉತ್ತನೂರು ರಾಜಮ್ಮ ವಿ. ಶೆಟ್ಟಿ
ಚಿಂತಾಮಣಿ

'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಮಹಿಳಾ ಸಾಹಿತ್ಯ' ಡಾ.. ಬಿ.ಎನ್. ಸುಮಿತ್ರಾ ಬಾಯಿಯವರ ವಿಶ್ಲೇಷಣೆ ಓದಿದಾಗ ಅನಿಸಿದ್ದು. ಈ ಲೇಖನ ಓದುತ್ತಿದ್ದಂತೆಯೇ ಅನಿಸಿದ್ದನ್ನು ಕೂಡಲೆ ಬರೆದು ಬಿಡಬೇಕೆನಿಸಿದರೂ ಬರವಣಿಗೆಗೆ ಬೇಕಾದ ಪರಿಕರವೇ ಇರಬಹುದು, ಸಿದ್ಧತೆಯೇ ಇರಬಹುದು ನನಗೆ ಇದ್ಯಾವುದರ ಕ್ರಮಾನುಭವ ಇಲ್ಲದೆ ಒಂದಿಷ್ಟು ಚಡಪಡಿಕೆ ಉಂಟಾಯಿತು. ಆದರೂ ಕಷ್ಟಪಟ್ಟು ಕೂಡಿಸಿ ಬರೆಯುತ್ತಿದ್ದೇನೆ.

ಸುಮಿತ್ರಾ ಬಾಯಿಯವರು ಬುಡ ಸಡಿಲಿಸಿ ತಿಳಿದ ಎಲ್ಲಾ ಅಂಶಗಳನ್ನು ಸ್ಪರ್ಶಿಸಿ ಮಹಿಳೆಯನ್ನು ಕೆತ್ತಿ ಬೊಂಬೆ ಮಾಡಿದ ಇಡೀ ಮಾನವ ಚರಿತ್ರೆಯನ್ನು ಇಂದಿನ ಆಧುನಿಕ ಚಿಂತನಕಾರರೂ ಒಂದಿಷ್ಟು ರೀಪ್ಲೇಸ್ ಮಾಡಿ ಹೊಸ ಮಣ್ಣು ಕೊಡುತ್ತಾರೆಯೇ ವಿನಃ ಸಾದ್ಯಂತವಾದ ಸ್ಥಿತಿ ಪ್ರಜ್ಞತೆಗೆ ಒಳಗಾಗುವುದೇ ಇಲ್ಲ ಎನ್ನುತ್ತಾರೆ. ಈ ಹಿಂದೆ ರಸ ಋಷಿಗೆ ನಮಸ್ಕಾರದಲ್ಲಿ ಸುಮಿತ್ರಾ ಬಾಯಿಯವರು ಕುವೆಂಪುರವರು ಮಹಿಳೆಯನ್ನು ಚೌಕಟ್ಟಿನಲ್ಲಿಯೇ ಚಿತ್ರಿಸುತ್ತಾರೆ ಅನ್ನುವ ಅರ್ಥದಲ್ಲಿ ಮಾತನಾಡಿದ್ದರು. ಇಲ್ಲಿ ನನ್ನ ಗ್ರಹಿಕೆಯನ್ನು ಹೇಳಲು ಪ್ರಯತ್ನಿಸುತ್ತೇನೆ. ಕುವೆಂಪು ಆಗಲಿ, ಹಳ್ಳಿಗಾಡಿನ ಶೂದ್ರ ವರ್ಗವಾಗಲಿ, ಮಹಿಳೆಯರಾಗಲಿ, ದಲಿತ ಸಮುದಾಯವಾಗಲಿ, ಕಟ್ಟಕಡೆಯ ದಲಿತ ಮಹಿಳಾ ಲೋಕವಾಗಲಿ ಮೆಟ್ಟಿಲು ಮೆಟ್ಟಿಲುಗಳಲ್ಲಿ ಅನುಭವ ದ್ರವ್ಯ ಹಾಗೂ ಬರವಣಿಗೆಯ ಕುಸರೀತನ ಮೈದುಂಬಿಕೊಳ್ಳುವ ಕಷ್ಟಸಾಧ್ಯತೆ ವಿಮರ್ಶೆಯ ವಾರೆಗಲ್ಲಿಗೆ ನಿಲುಕಲಾರದಲ್ಲವೆ?

ಎಲ್. ಎಸ್. ಶೇಷಗಿರಿ ರಾಯರಾಗಲಿ, ಮಾಸ್ತಿಯವರಾಗಲಿ

ಶಿಷ್ಟ ಸಂಸ್ಕೃತಿಯ ಒರಿಜಿನಾಲಿಟಿಗೆ ಎಷ್ಟೇ ಆಗಲಿ ಜನ್ಮಾಂತರದ ವಸರು ಅಂಟಿಸಿಕೊಂಡಿವರು ಮಾಸ್ತಿಯವರ ವೆಂಕಟಗನ ಹೆಂಡತಿ ಬೇರೆ ಗಂಡಿನ ಜೊತೆ ಹೋಗಿ ಮಗುವನ್ನು ಕಂಕುಳಲ್ಲಿಟ್ಟು ಬಂದವಳನ್ನು ಗಂಡ ಸ್ವೀಕರಿಸುತ್ತಾನೆ. ಅದೇ ಬ್ರಾಹ್ಮಣ ವರ್ಗದ ಗುಂಡನ ಪ್ರೇಮಿ, ವಿಧವೆ ಯುವತಿ ತನ್ನೆಲ್ಲಾ ಕಾಮನೆಗಳನ್ನು ಅದುಮಿಟ್ಟು ಒಣಗುತ್ತಾಳೆ ಇದೊಂದು ಮಾಸ್ತಿಯವರ ಮೀರಲಾರದ ಜನ್ಮಿಕ ಗುಣಕ್ಕೆ ಸಾಕ್ಷಿ ಎನ್ನಬಹುದು.

ಸುಮಿತ್ರಾ ಬಾಯಿಯವರ ವಿಶ್ಲೇಷಣೆಯಲ್ಲಿನ ಪಾರದರ್ಶಕತೆ ನಿಜಕ್ಕೂ ಮೆಚ್ಚುವಂತಹದು. ಅವರೇ ಹೇಳಿರುವಂತೆ ಪ್ರಧಾನ ಸಾಹಿತ್ಯ ದೃಷ್ಟಿಯಿಂದ ದೀರ್ಘಕಾಲದಿಂದ ನಿರ್ಲಕ್ಷ್ಯಕ್ಕೆ ಒಳಗಾದ ಮಹಿಳಾ ದಲಿತ, ಮುಸ್ಲಿಂ ಅಥವಾ ಬುಡಕಟ್ಟು ನೆಲೆಗಳಿಂದ ಹುಟ್ಟಿ ಮೌಖಿಕ ಅಥವಾ ಲಿಖಿತ ಸಾಹಿತ್ಯ ಮಾದರಿಗಳೆಲ್ಲವೂ ಬೇರೆ ಬೇರೆ ಅಂತಃ ಸತ್ವದ ಲಕ್ಷಣಗಳನ್ನು ಮುಖ್ಯವಾಹಿನಿಗೆ ತಂದು ಸೇರಿಸುವ ಬಗೆಯ ತುಂಬು ಕುತೂಹಲಕರ ಶೋಧನೀಯ ಸಂಗತಿಯಾಗಿ ತೋರುತ್ತದೆ. ಹೀಗೆ ಯೋಚಿಸುವಾಗ ಇಲ್ಲಿನ ನೆಲದಲ್ಲಿ ತಳ ಊರಿರುವ ಕಸಿಗೊಂಡ ವಿಚಾರಧಾರೆಗಳಲ್ಲಿ ಮಾಪಕಗಳಲ್ಲಿ ಒಂದು ರೀತಿ ದಿಕ್ಕು ತಪ್ಪಿಸುವ ವಿಮರ್ಶಾ ಮಾನದಂಡ ಎಲ್ಲ ಮೀಡಿಯಾಗಳ ಗೊಂದಲಗಳಲ್ಲಿ 90 ಪರ್ಸೆಂಟ್ ಬದುಕನ್ನು ಲೆಕ್ಕಕ್ಕೇ ತೆಗೆದುಕೊಳ್ಳದಂತೆ ಉದಾಸೀನ ಮಾಡುತ್ತಿರುವ ಪರಿ ತಳ ಬದುಕಿನಲ್ಲಿ ಬೇಯುತ್ತಿರುವ ಮಹಿಳಾ ಸಾಹಿತ್ಯವಾಗಲಿ, ಮಹಿಳಾ ಬದುಕಾಗಲಿ, ಅವಳ ಪ್ರಕೃತಿ ಜನ್ಯ ಸೃಜನತೆಯಾಗಲಿ ಯಾವುದೂ ಸಹ ದಾಖಲೆಗೊಳ್ಳುವುದು ಅಸಾಧ್ಯವೇ ಸರಿ.

ಲೇಖಕಿಯ ನಿರೀಕ್ಷೆಯಂತೆ ಕೇವಲ ಈ ನಾಡಿನ ಸಂಸ್ಕೃತಿಯ ಒಳಗಣ್ಣು ತೆರೆಯಬೇಕಷ್ಟೆ.

# ಮುಕ್ತಿ ಎಂದೋ ಹೋರಾಟಕ್ಕೆ ?

**ಹೆಣ್ಣು - ಹಕ್ಕು - ಹೋರಾಟ**
ಲೇ : ವೆಂ. ವನಜ
ಮು : 2003, ಪುಟ - 90, ಬೆಲೆ - 80 ರೂ.ಗಳು.
ಪು : ಸಮತಾ ಅಧ್ಯಯನ ಕೇಂದ್ರ, ಮೈಸೂರು.

ಲಿಂಗತಾರತಮ್ಯ, ಸಾಮಾಜಿಕ ಅಸಮಾನತೆಯ ವಿರುದ್ಧ ಹೋರಾಡುತ್ತಲೇ ಬಂದಿರುವ ಮೈಸೂರಿನ 'ಸಮತಾ ಅಧ್ಯಯನ ಕೇಂದ್ರ' ಪುಸ್ತಕ ಪ್ರಕಟಣೆಯಲ್ಲೂ ಹಿಂದೆ ಬಿದ್ದಿಲ್ಲ. ಅಕ್ಷರ ಕಲಿಯದವರೊಂದಿಗೆ ನೇರವಾಗಿ ಬೆರೆತು ಮಹಿಳೆಯರ ಸ್ವಾತಂತ್ರ್ಯ, ಸಮಾನತೆ, ಹಕ್ಕುಗಳಿಗಾಗಿ ನಡೆಸುವ ಹೋರಾಟ ಒಂದು ಬಗೆಯದಾದರೆ, ಅಕ್ಷರ ಕಲಿತ ವರ್ಗಕ್ಕೆ ತಾವು ತೊಡಗಿಸಿಕೊಂಡ ಪರಿ, ಚಟುವಟಿಕೆಗಳು, ಅನುಭವಗಳನ್ನು ದಾಖಲಿಸುವ ಕ್ರಮ ಇನ್ನೊಂದು ಬಗೆ. ಇವೆರಡನ್ನೂ ಗಂಭೀರವಾಗಿಯೇ ಚಿಂತಿಸಿ ಪರಿಗಣಿಸಿರುವದು ಮೈಸೂರಿನ ಸಮತಾ ಅಧ್ಯಯನ ಕೇಂದ್ರ. ಅಕ್ಷರಶಃ ಅದರ ಒಂದು ಭಾಗವೇ ಆಗಿಬಿಟ್ಟಿರುವ ವೆಂ. ವನಜಾರ 'ಹೆಣ್ಣು - ಹಕ್ಕು - ಹೋರಾಟ' ಕೃತಿಯನ್ನು ಪ್ರಕಟಿಸಿದೆ.

ಮಾತು ಮತ್ತು ಕೃತಿಗಳೆರಡರಲ್ಲೂ ತಮ್ಮನ್ನು ತೊಡಗಿಸಿಕೊಂಡವರು ವೆಂ. ವನಜಾ. ಅದರ ಫಲವೇ ಪ್ರಸ್ತುತ ಕೃತಿ. ಈ ಕೃತಿಯ ಹೆಸರನ್ನು ಓದುತ್ತಿದ್ದಂತೆಯೇ ನಮ್ಮ ಮಹಿಳೆಯರು ಇನ್ನೂ ಎಷ್ಟು ವರ್ಷಗಳು ಹೀಗೆ ತಮ್ಮ ಮೂಲಭೂತ ಹಕ್ಕುಗಳಿಗಾಗಿ ಹೋರಾಡುತ್ತಲೇ ಇರಬೇಕು ?- ಎಂದೆಂದಿಗೂ ಮುಗಿಯದೇ ಉಳಿದು ಬಿಡುವ ಪ್ರಶ್ನೆಯಾಗಿ ಕಾಡುತ್ತದೆ. ಕನ್ನಡದಲ್ಲಿ ಈಗಾಗಲೇ 'ಹೆಣ್ಣು - ಹಕ್ಕು - ಹೋರಾಟ'ಕ್ಕೆ ಸಂಬಂಧಿಸಿದಂತೆ ಸಾಕಷ್ಟು ಪುಸ್ತಕಗಳು ಪ್ರಕಟಣೆಯಾಗಿದ್ದರೂ ಇದುವರೆಗೂ ಗಮನಿಸಿದ ಕೆಲವು ಅಂಕಿ - ಅಂಶಗಳು, ಘಟನೆಗಳು ಈ ಕೃತಿಯಲ್ಲಿ ದಾಖಲಾಗಿವೆ. ಆ ಕಾರಣಕ್ಕಾಗಿಯೇ ಈ ಪುಸ್ತಕ ಮುಖ್ಯವೆನಿಸುತ್ತದೆ ಕೂಡ.

ಯಾವಾಗಲೂ ಸಮಾಜದ ಒಳಿತಿಗಾಗಿ ಪುರುಷರಷ್ಟೇ ಪಾಲು ಮಹಿಳೆಯರದ್ದೂ ಕೆಲವೊಮ್ಮೆ ಹೆಚ್ಚಾಗಿಯೇ - ಇದ್ದೇ ಇರುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷರನ್ನು ಮಾತ್ರ ಪ್ರಧಾನಕ್ಕೇರಿಸಿ, ಮಹಿಳೆಯರನ್ನು ಸಂಪೂರ್ಣವಾಗಿ ಗೌಣವಾಗಿಸುವ ಕೆಲಸ ನಡೆಯುತ್ತಲೇ ಇರುತ್ತದೆ. ಇಂಥ ಕೃತಿಗಳು ಅಂಥವನ್ನು ಸುಳ್ಳೆಂದು ಸಾರುತ್ತಲೂ ಬರುತ್ತಿವೆ. ಸ್ವದೇಶಿ ಚಳುವಳಿ, ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ, ಕ್ವಿಟ್ ಇಂಡಿಯಾ ಚಳುವಳಿ - ಹೀಗೆ ಎಲ್ಲ ಹೋರಾಟಗಳಲ್ಲೂ ಮಹಿಳೆಯರ ಪಾಲು ಇದ್ದೇ ಇದೆ. ಚಳುವಳಿಗಳ ಹೊರತಾಗಿ ಕೆಳವರ್ಗದ ಹೆಣ್ಣು - ಮಕ್ಕಳ ಬದುಕಿನ ಸ್ಥಿತಿಗತಿಯನ್ನು ಕುರಿತು ಈ ಪುಸ್ತಕ ಚಿಂತಿಸುತ್ತದೆ. ನೆಮ್ಮದಿಯ ಬದುಕಿಗಾಗಿ ತಮ್ಮ ಕುಟುಂಬಗಳನ್ನು

ಉಳಿಸಿಕೊಳ್ಳುವ ಸಲುವಾಗಿ ಸಾರಾಯಿ ವಿರೋಧಿ ಚಳುವಳಿಗಳಲ್ಲೂ ತಮ್ಮನ್ನು ತೊಡಗಿಸಿಕೊಳ್ಳುವ ಹೆಣ್ಣು ಮಕ್ಕಳ ಬದುಕನ್ನು ಕುರಿತೂ ದನಿ ಎತ್ತುತ್ತದೆ. ಸರ್ಕಾರಗಳೇ ಶಾಮೀಲಾಗಿರುವ ಪರಿಯನ್ನೂ ವಿವರಿಸುತ್ತದೆ. ನಿಜವಾಗ್ಗಿಯೂ ಇದಕ್ಕೆಲ್ಲ ಕೊನೆ ಎಂದು ?

ಸ್ವಾತಂತ್ರ್ಯ ಬಂದು ಐವತ್ತೇಳು ವರ್ಷಗಳಾದರೂ ಹೆಣ್ಣು ಮಕ್ಕಳ ಅದರಲ್ಲೂ ಗ್ರಾಮೀಣ ಹೆಣ್ಣು ಮಕ್ಕಳ ಪರಿಸ್ಥಿತಿ ಏನೇನೂ ಉತ್ತಮಗೊಂಡಿಲ್ಲವೆಂಬುದನ್ನು ಅಂಕಿ - ಅಂಶಗಳೊಂದಿಗೆ ವನಜಾ ಅವರು ದಾಖಲಿಸುತ್ತಾರೆ. ಎಲ್ಲ ಹೆಣ್ಣು ಮಕ್ಕಳಿಗೂ ತಲುಪದ ಶಿಕ್ಷಣ, ಅದಕ್ಕಿರುವ ತೊಡಕುಗಳು, ಕಾರಣಗಳು ಜೊತೆಗೆ ಪರಿಹಾರೋಪಾಯಗಳನ್ನೂ ಸೂಚಿಸುತ್ತಾರೆ. ಇಡೀ ಕೃತಿಯನ್ನು ಗಮನಿಸಿದಾಗ, ಹೋರಾಟದ ಚಳುವಳಿಗಳಲ್ಲಿ 'ತಾವು ಯಾರಿಗೂ ಕಡಿಮೆಯಿಲ್ಲ' ವೆಂದು ಹೋರಾಡುವ ಹೆಣ್ಣು ಮಕ್ಕಳು ಒಂದೆಡೆಯಿದ್ದರೆ, ಶಿಕ್ಷಣ ತಲುಪದ ಕಾರಣಕ್ಕಾಗಿಯೇ ಅಸಹಾಯಕತೆಯಿಂದ ಬಳಲುವ ಹೆಣ್ಣು ಮಕ್ಕಳು ಮತ್ತೊಂದೆಡೆ. ವಿಪರ್ಯಾಸವೆಂದರೆ ಶಿಕ್ಷಣ ಕಲಿತೂ ಆರ್ಥಿಕವಾಗಿ ಸಬಲರಾಗಿಯೂ ಹೆಣ್ಣೆಂಬ ಕಾರಣಕ್ಕಾಗಿಯೋ ಶೋಷಿಸುವ ದಂಡೇ ನಮ್ಮ ಸಮಾಜದಲ್ಲಿರುವುದನ್ನು ಗುರುತಿಸುತ್ತಾರೆ. ಅದು ವರದಕ್ಷಿಣೆಯ ಕಾರಣಕ್ಕಾಗಿಯೋ, ಹೆಚ್ಚು ಕಲಿತವಳೆಂಬ ಹೊಟ್ಟೆಕಿಚ್ಚಿಗೆತುತ್ತಾಗಿಯೋ ಬದುಕನ್ನು ಸವೆಸುವ ಹಾಗೆ ಸವೆಸಲಾಗದವರು ಸಾವಿಗೆ ಶರಣಾಗುವವರ ಸಂಖ್ಯೆಯೇನೂ ಕಡಿಮೆಯಿಲ್ಲವೆಂಬ ವಾಸ್ತವ ಸ್ಥಿತಿಯ ದಾಖಲೆಯೂ ಇಲ್ಲಿದೆ.

ಹೆಣ್ಣು ಮಕ್ಕಳು ಇದುವರೆಗೆ ತಮ್ಮನ್ನು ಬದುಕಿನ ಎಷ್ಟೆಲ್ಲಾ ಹೋರಾಟಕ್ಕೆ ತೊಡಗಿಸಿಕೊಂಡ ಬಗೆ ಮತ್ತು ತೊಡಗಿಸಿಕೊಳ್ಳಬೇಕಾಗಿರುವ ಬಗೆಯನ್ನು ಕುರಿತ ನಿಟ್ಟಿನಲ್ಲಿ ಕೃತಿಯ ವಿಶ್ಲೇಷಣೆಯಿದೆ. ಇದರ ಮೂಲಕ ಹೆಣ್ಣು ಮಕ್ಕಳ ಎಲ್ಲ ಸಮಸ್ಯೆಗಳ ಮಗ್ಗಲುಗಳನ್ನು ವನಜಾ ಅವರು ಬಿಡಿಸಿಡುತ್ತಾರೆ. ಸಮಸ್ಯೆಗಳಿಗೆ ಸಂಬಂಧಪಟ್ಟವರು ಮಾಡಬೇಕಾದ ಕರ್ತವ್ಯಗಳ ಬಗೆಗೂ ಎಚ್ಚರಿಸುತ್ತಾರೆ.

ಡಾ || ಎಂ.ಎಸ್. ವೇದ ಮತ್ತು ರಾಜಪ್ಪದಳವಾಯಿಯವರ ಸಮರ್ಥ ಮುನ್ನುಡಿ ಹಾಗೂ ಬೆನ್ನುಡಿಗಳೊಂದಿಗಿನ ಈ ಪುಸ್ತಕವನ್ನು ಪ್ರಕಟಿಸಿದರೆ ಮಾತ್ರ ಸಾಲದು, ಇದು ಹಲವರ ಕಣ್ಣಿಗೆ ಬೀಳುವಂತೆ, ಕೈಗೆ ಸಿಗುವಂತೆ, ಸರ್ಕಾರಕ್ಕೂ ತಲುಪಿಸುವ ಕೆಲಸವೂ ಆಗಬೇಕಾಗಿದೆ. ನಿಸ್ವಾರ್ಥವಾಗಿ ಸೇವೆ ಸಲ್ಲಿಸುತ್ತಿರುವ ಸಂಘ ಸಂಸ್ಥೆಗಳು ಜೊತೆಗೆ ಸರ್ಕಾರಗಳೂ ಕೂಡ ವಾಸ್ತವ ಸ್ಥಿತಿಯನ್ನು ಗಂಭೀರವಾಗಿ ಪರಿಗಣಿಸಿದಲ್ಲಿ ಇಂಥ ನಿಸ್ವಾರ್ಥ ಹೋರಾಟಕ್ಕೊಂದು ಅರ್ಥವಾದರೂ ಸಿಕ್ಕೀತು!

- ಗೀತಾ ಡಿ.ಸಿ.
ಬೃಂದಾವನ್ ಕಾಲೇಜು,
ಭೂಪಸಂದ್ರ,
ಹೆಬ್ಬಾಳ - ಅಂಚೆ,
ಬೆಂಗಳೂರು - 94.

# ಮಹಿಳೆಯರು - ಮತಾಂತರ - ಬೆನ್‌ಹಿನ್

ಸ್ವ- ಸಹಾಯ ಗುಂಪಿನಲ್ಲಿ ಸಭೆಯಲ್ಲಿ ಹಣಕಾಸಿನ ವಿಷಯವನ್ನು ಮುಗಿಸಿ ಅಪರೂಪಕ್ಕೆ ವಿರಾಮದಿಂದ ಕೂತಿದ್ದ ಎಂಟು - ಹತ್ತು ಜನ ಮಹಿಳೆಯರ ಮಾತು - ಕತೆ ಸುನಾಮಿ ದುರಂತದ ಕಡೆಗೆ ಎಳೆಯಿತು. ಸುನಾಮಿ ಸಂತ್ರಸ್ತರಿಗೆ ಮಹಾಪೂರದಂತೆ ಹರಿದು ಬರುತ್ತಿರುವ ನೆರವು, ಕೇರಳದಲ್ಲಿ ಅತ್ಯಂತ ಶ್ರೀಮಂತನೊಬ್ಬ ಎಲ್ಲವನ್ನು ಕಳೆದುಕೊಂಡು ಅನಾಥನಾಗಿರುವ ವಿಚಾರ, ಕರ್ನಾಟಕದ ಜನತೆ ನೀಡಿದ ನೆರವು ಹೀಗೆ ಒಬ್ಬೊಬ್ಬರು ಒಂದೊಂದು ವಿಚಾರ ಹೇಳುತ್ತಲೇ ಸಹಜವಾಗಿ ಮಾತು ಬೆನ್‌ಹಿನ್ ಕಾರ್ಯಕ್ರಮದೆಡೆಗೆ ಹೊರಳಿತು. ಬೆನ್‌ಹಿನ್ ಎರಡು ಕೋಟಿ ರೂ.ಗಳನ್ನು ಸುನಾಮಿ ಸಂತ್ರಸ್ತರಿಗೆ ನೀಡಲು ಒಪ್ಪಿಕೊಂಡಿರುವುದು. ಆದರೆ ಈ ಹಣವನ್ನು ಯಾರು ಮತಾಂತರವಾಗುತ್ತಾರೋ ಅವರಿಗೆ ಮಾತ್ರ ಕೊಡುತ್ತಾರೆ. ಕ್ರಿಶ್ಚಿಯನ್ ಆಗಿ ಪರಿವರ್ತನೆಯಾಗುವವರಿಗೆ ಮಾತ್ರ ಮನೆ ಕಟ್ಟಿಸಿ ಕೊಡುತ್ತಾರೆ ಎಂದು ಒಬ್ಬರು ಹೇಳುತ್ತಿದ್ದಂತೆ ಮಾತು ಮತಾಂತರದ ಕಡೆಗೆ ಹೊರಳಿತು.

ಇನ್ನೊಬ್ಬಾಕೆ ನಮ್ಮ ಮನೆಯಲ್ಲಿ ನಾನು ಮತ್ತು ನಮ್ಮ ಯಜಮಾನರು ಹಾಗೂ ನಮ್ಮ ಮಾವ ಮಾತ್ರ ಹಿಂದುಗಳು, ಇನ್ನು ನಮ್ಮ ಅತ್ತೆ ಮೈದುನ, ಮೈದುನನ ಹೆಂಡತಿ ಎಲ್ಲರೂ ಕ್ರಿಶ್ಚಿಯನ್ ಆಗಿ ಮತಾಂತರವಾಗಿದ್ದಾರೆ. ಅವರು ನಮ್ಮನ್ನು

ಮತಾಂತರವಾಗುವಂತೆ ಒತ್ತಾಯಿಸುತ್ತಾರೆ. ಇವತ್ತಲ್ಲಾ ನಾಳೆ ನೀನು ಸಹ ಕ್ರಿಶ್ಚಿಯನ್ ಆಗ್ತೀಯಾ ಎಂದು ಹೇಳುತ್ತಾರೆ. ಆದರೆ ನಾನು ಯಾಕೆ ಆಗ್ಬೇಕು ಹೇಳಿ. ಅವರು ಯಾವಾಗಲು ನೀವು ಮೂರ್ತಿ ಪೂಜೆ ಮಾಡ್ತೀರಾ ನಿಮಗೆ ನೂರಾಎಂಟು ದೇವರುಗಳಿವೆ ಎಂದು ಹಂಗಿಸುತ್ತಾರೆ ಎಂದೊಡನೆ ಇನ್ನೊಬ್ಬಾಕೆ ಯಾವ ದೇವರನ್ನು ಯಾರೂ ಹಿಯಾಳಿಸಬಾರದು. ನಿತ್ಯ ಯಾವ ದೇವರನ್ನು ಪೂಜೆ ಮಾಡಿದ್ರು ಅದು ಕೊನೆಯಲ್ಲಿ ತಲುಪುವುದು ಒಬ್ಬನೇ ದೇವರನ್ನೆ. ಅದು ಕೇವಲ ನಂಬಿಕೆ ಪ್ರಶ್ನೆ. ಒಬ್ಬರು ಒಂದು ಕಲ್ಲು ಇಟ್ಟು ನಂಬಿಕೆಯಿಂದ ಪೂಜೆ ಮಾಡಿದ್ರೆ ಅದು ಅವರಿಗೆ ದೇವರ ಸ್ವರೂಪ. ಆದರೆ ಹಿಯಾಳಿಸದೇ ಗೌರವಿಸುವ ಭಾವನೆಯನ್ನು ಬೆಳೆಸಿಕೊಳ್ಳಬೇಕು ಎಂದರು ಇನ್ನೊಬ್ಬಾಕೆ.

ಮೂರ್ತಿ ಎಳೆಯನ್ನು ಹಿಡಿದ ಇನ್ನೊಬ್ಬರು ನೋಡಿ ಮೊನ್ನೆ ನನ್ನ ಮಗಳಿಗೆ ತುಂಬಾ ಜ್ವರ. ಡಾಕ್ಟರ್ ಹತ್ತಿರ ಕರೆದುಕೊಂಡು ಹೋದೆ. 700 ರೂ ಖರ್ಚಾಯಿತು. ಆದ್ರೂ ವಾಸಿಯಾಲಿಲ್ಲ. ನಿಂತಲ್ಲೇ ಬೀಳುತ್ತಿದ್ದಳು. ಶುಕ್ರವಾರ ಮಸೀದಿಗೆ ಕರೆದುಕೊಂಡು ಹೋದೆ. ಅಲ್ಲಿ ಯಂತ್ರ ಹಾಕಿಸಿದೆ. ಈಗ ಚನ್ನಾಗಿ ವಾಸಿಯಾಗಿದೆ. ನಾನು ಹಿಂದು. ಮಸೀದಿಗೆ ಹೋಗಿ ನಂಬಿಕೆಯಿಂದ ಹಾಕಿಸಿಕೊಂಡು ಬಂದೆ. ಅವರ ಧರ್ಮದ ಮೇಲೂ ಒಂದು ರೀತಿಯ ಗೌರವ, ನಂಬಿಕೆ ನನಗೂ ಇದೆ. ಅದಕ್ಕಾಗಿ ನಾನು ಮತಾಂತರವಾಗಬೇಕಿಲ್ಲ. ಆದರೂ ನಮ್ಮ ದೇವರುಗಳನ್ನು ಅಗೌರವದಿಂದ ಕಾಣುವುದಿಲ್ಲ ಎಂದು ಮಾತು ಮುಗಿಸುತ್ತಿದ್ದ ಹಾಗೆ ಇನ್ನೊಬ್ಬಾಕೆ ಕರಗದ ಸಮಯದಲ್ಲಿ ದೇವರು ದರ್ಗಾಕ್ಕೆ ಹೋಗುವ ವಿಚಾರ. ಹಿಂದೂ ಹಾಗೂ ಮುಸಲ್ಮಾನರು ಸೇರಿ ಆಚರಿಸುವ ಹಬ್ಬಗಳ ವಿಚಾರಗಳನ್ನು ಹೇಳತೊಡಗಿದರು.

ಮಾತು ಮತ್ತೆ ಬೆನ್‌ಹಿನ್ ಕಡೆಗೆ ತಿರುಗಿತು. ಚರ್ಚ್ ಬಗ್ಗೆ ಯಾರಿಗೂ ಪೂರ್ಣವಾದ ನಂಬಿಕೆಯಿರಲಿಲ್ಲ. ಅಷ್ಟು ಪವಾಡ ಪುರುಷನಾಗಿದ್ದರೆ ಅಲ್ಲಿಗೆ ಬಂದ ಎಲ್ಲಾ ರೋಗಿಗಳನ್ನು ವಾಸಿ ಮಾಡಬಹುದಿತ್ತು ? ಆದರೆ ಅಲ್ಲಿಗೆ ಬಂದ ಎಲ್ಲರಿಗೂ ವಾಸಿಯಾಗಿಲ್ಲ. ಯೇಸುವೇ ಎಲ್ಲವನ್ನು ಕಾಪಾಡುವುದಾಗಿದ್ದರೆ ವೇಲಾಂಗಿಣಿ ಚರ್ಚ್‌ಗೆ ಪ್ರಾರ್ಥನೆಗೆಂದು ಹೋದ ಬಹಳಷ್ಟು ಜನ ಸುನಾಮಿ ದುರಂತಕ್ಕೆ ಬಲಿಯಾದರಲ್ಲ. ಅವರನ್ನೆಲ್ಲಾ ರಕ್ಷಿಸಬಹುದಾಗಿತ್ತಲ್ಲ ಎಂಬ ಪ್ರಶ್ನೆಯನ್ನು ಎಸೆದರು. ಇನ್ನೊಬ್ಬರು ನನ್ನ ಅಣ್ಣ ಕೈಕಾಲು ಬಿದ್ದು, ಎಷ್ಟು ವರ್ಷಗಳಿಂದ ಹಾಸಿಗೆ ಹಿಡಿದಿದ್ದಾನೆ. ನನ್ನನ್ನು ಚರ್ಚ್‌ಗೆ ಬಾ ಎಂದರು. ನಮ್ಮ ಮನೆಗೆ ಬಂದು ಪ್ರಾರ್ಥನೆ ಮಾಡಿದರು. ಆದರೂ ಯಾಕೆ ವಾಸಿಯಾಗಲಿಲ್ಲ? ಮತ್ತೊಂದು ಪ್ರಶ್ನೆಯನ್ನು ಜೋಡಿಸಿದರು.

ನೋಡಿ, ನಮ್ಮ ಮನೆಯಲ್ಲಿ ನಾನೊಬ್ಬಳೇ ಹಿಂದು. ನನ್ನ ಮಗಳು, ಮಗ ಎಲ್ಲರೂ ಮತಾಂತರವಾಗಿದ್ದಾರೆ. ನಾನು ಮಾತ್ರ ಆಗಿಲ್ಲ. ಈ ವಿಷಯದ ಬಗ್ಗೆ ಮಾತು ಬಂದಾಗಲೆಲ್ಲ ನಮ್ಮ ಮನೆಯಲ್ಲಿ ಜಗಳ. ನೀವು ಮೂರ್ತಿ ಪೂಜೆ ಮಾಡುತ್ತೀರಿ ಅಂತ ನನ್ನ ಮಗ ಹಂಗಿಸುತ್ತಾನೆ. ನನ್ನ ತಂಗಿಯರು ಮತಾಂತರವಾಗಿದ್ದಾರೆ. ಆದರೆ ನನಗೆ ನಂಬಿಕೆಯಿಲ್ಲ. ಮಾತಿಗೆ - ಮಾತು ಸೇರಿ ಜಗಳದಲ್ಲಿ ಅಂತ್ಯವಾಗುತ್ತದೆ. ಹಾಗಾಗಿ ನಾನು ಏನೂ ಮಾತನಾಡಲು ಹೋಗುವುದಿಲ್ಲ ಎಂದು ಹೇಳುತ್ತಾಳೆ ಆಕೆ. ನಿಜ ಹೇಳ್ಲೆ, ಕ್ರಿಶ್ಚಿಯನ್‌ರಲ್ಲಿಯೇ ನಾನಾ ತರದವರಿದ್ದಾರೆ. ಒಂದು ಚರ್ಚಿಗೆ ಹೋಗುವುದನ್ನು ಕಂಡರೆ ಇನ್ನೊಬ್ಬರಿಗೆ ಆಗೋಲ್ಲ. ಆದರೆ ಕಾಯಿಲೆ ವಾಸಿಯಾಗೋದು ಇದು ಸಾಧ್ಯವಿಲ್ಲ ಬಿಡಿ. ಕಿಡ್ನಿ ಫೇಲ್ ಆದರೆ, ಹಾರ್ಟ್ ಸಮಸ್ಯೆಯಿದ್ದರೆ ಅವುಗಳನ್ನು ಹೇಗೆ ಪ್ರಾರ್ಥನೆ ಮಾಡಿ ವಾಸಿ ಮಾಡುವುದಕ್ಕೆ ಆಗುತ್ತದೆ. ಆದರೆ ಇದು ಕೇವಲ ನಂಬಿಕೆಯ ವಿಚಾರ ಬಿಡಿ ಎಂದು ಮಾತು ಮುಗಿಸಿದರು.

ಕ್ರಿಶ್ಚಿಯನ್ನರು ಬೇಕಾದರೆ ಅವರ ಧರ್ಮದವರ ಬಗ್ಗೆ, ಯೋಸುವಿನ ಬಗ್ಗೆ ಹೇಳಲಿ, ಆದರೆ ಅವರು ಇತರ ಧರ್ಮದವರನ್ನು ಟೀಕಿಸಬಾರದು. ಅವರ ನಂಬಿಕೆ ಅವರಿಗಿರಲಿ. ಇತರರ ನಂಬಿಕೆ ಇತರರಿಗಿರಲಿ. ಬೇರೆಯವರ ಕಾಯಿಲೆ ವಾಸಿ ಮಾಡ್ತೀವಿ, ಅಂತ ಅವರನ್ನು ಪುಸಲಾಯಿಸಿ ಮತಾಂತರವಾಗುವಂತೆ ಮಾಡುವುದು ತಪ್ಪು. ಆಕೆಯ ಮಾತಿಗೆ ಪ್ರತಿಕ್ರಿಯೆ.

ಹಿಂದುಗಳು ನಾವೆಲ್ಲ ಒಂದು ಎಂದು ಹೇಳುತ್ತೇವೆ. ಆದರೆ ಹಿಂದುಗಳಲ್ಲಿ ನೂರೆಂಟು ಜಾತಿಗಳಿವೆ. ಜಾತಿಗೊಂದು ಮಠ ಇದೆ. ಆದರೆ ಕ್ರಿಶ್ಚಿಯನ್ನರ ಹಾಗೆ ಮಠದವರು ಬಡವರು, ಬಗ್ಗರು ಅನಾಥರು, ದಿಕ್ಕಿಲ್ಲದವರು, ಹರಿಜನರಿಗೆ ನೆರವಾಗುವುದರ ಮೂಲಕ ಅವರ ಧರ್ಮಕ್ಕೆ ಸೇರಿಸಿಕೊಳ್ಳುತ್ತಾರೆ. ಹಿಂದೂಗಳು ತಮ್ಮ ಹಬ್ಬದಲ್ಲಿ ಎಷ್ಟು ಜನ ಬಡಬಗ್ಗರಿಗೆ ಊಟ ಹಾಕುತ್ತಾರೆ ? ಹಿಂದುಗಳನ್ನೆ ತಮ್ಮ ಮನೆಗೆ ಸೇರಿಸುತ್ತಾರೆ ? ಕ್ರಿಶ್ಚಿಯನ್ನರು ಮಾಡುವ

ಕೆಲಸಗಳನ್ನು ಹಿಂದೂ ಮಠಗಳವರು, ಜನರು ಮಾಡಲಿ. ಆಗ ಯಾಕೆ ಜನ ಮತಾಂತರದ ಆಸೆಗೆ ಬಲಿ ಬೀಳುತ್ತಾನೆ ಎನ್ನುವ ಮಾತಿಗೆ ಹೌದೆಂಬಂತೆ ತಲೆದೂಗುತ್ತಾರೆ. ಯಾರಿಗೆ ಯಾವ ದೇವರು ಇಷ್ಟ ಅದನ್ನು ಪೂಜೆ ಮಾಡಿರಿ. ದೇವರು ಒಬ್ಬ ನಾಮ ಹಲವು. ಮನುಷ್ಯ ತೀರಾ ಕೆಳಗೆ ಬಿದ್ದಾಗ, ಏನಾದ್ರು ಒಂದು ಶಕ್ತಿಯನ್ನು ನಂಬಲೇ ಬೇಕು. ಅವರವರ ನಂಬಿಕೆ ಅವರವರದು. ಆದ್ರೆ ಜನರ ಅಸಹಾಯಕತೆ, ಬಡತನ ಮುಂತಾದ ವೀಕ್‌ನೆಸ್‌ಗಳನ್ನು ಉಪಯೋಗಿಸಿಕೊಂಡು ಮತಾಂತರಕ್ಕೆ ಪುಸಲಾಯಿಸುವುದು ಸಹ ತಪ್ಪು. ಕೊನೆಯಲ್ಲಿ ಮನೆಗೆಲಸಗಳನ್ನು ನೆನಪಿಸಿಕೊಂಡು ಮೆಲ್ಲಗೆ ಒಬ್ಬೊಬ್ಬರೆ ಜಾಗ ಖಾಲಿ ಮಾಡಿದರು.

ಧರ್ಮ-ಸಂಸ್ಕೃತಿಯನ್ನು, ಧರ್ಮ-ಮೂಢ ನಂಬಿಕೆಯನ್ನು ತಳುಕು ಹಾಕುವುದು ನಡೆಯುತ್ತಲೇ ಬಂದಿದೆ. ಭಾರತದಂತಹ ದೇಶದಲ್ಲಿ ಇದು ಸುಲಭ ಮಾತ್ರವಲ್ಲ. ಪಟ್ಟಭದ್ರ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದು ಇದರಿಂದ ಮಾತ್ರ ಸಾಧ್ಯವಾಗುತ್ತದೆ. ಹಾಗಾಗಿಯೇ ಕಾರ್ಲ್‌ಮಾರ್ಕ್ಸ್ ಧಾರ್ಮಿಕ ಅಮಲನ್ನು ಅಫೀಮಿನ ಅಮಲು ಎಂದು ಹೋಲಿಸಿ ಹೇಳಿರುವುದು ಎನಿಸುತ್ತದೆ.

ಯಾವುದೇ ಧರ್ಮವಾಗಿರಲಿ, ಹಿಂದೂ, ಕ್ರಿಶ್ಚಿಯನ್, ಇಸ್ಲಾಂ ಮೂಲಭೂತವಾದಕ್ಕು ಮೂಢ ನಂಬಿಕೆಗಳಿಗೂ ಒಂದು ರೀತಿಯ ಸಂಕೀರ್ಣ ಸಂಬಂಧ ಇರುವುದನ್ನು ನೋಡಬಹುದು. ಇಂತಹ ಧಾರ್ಮಿಕ ನಂಬಿಕೆಗಳನ್ನು ಕಟ್ಟುನಿಟ್ಟಾಗಿ ಮುಂದುವರಿಸಿಕೊಂಡು ಹೋಗುವವರು ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರು. ಈ ಹಿನ್ನೆಲೆಯಲ್ಲಿ ಮಹಿಳೆಯರು ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಆದರೆ, ಇದು ಐತಿಹಾಸಿಕವಾಗಿ ಮಹಿಳೆಯರು ಮಾಡಿದ ನಿರ್ಧಾರವಲ್ಲ. ಸಮಾಜ ಹಾಗೂ ಕುಟುಂಬದಲ್ಲಿ ನಿರ್ಧಾರಿತ ಸ್ಥಾನ - ಮಾನ, ಅವರು ಈ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುವಂತೆ ಮಾಡುತ್ತಾರೆ. ಇದು ಎಲ್ಲಾ ಧರ್ಮದ ಮೂಲ ಭೂತವಾದಕ್ಕೆ ಅನ್ವಯವಾಗುತ್ತದೆ. ಧಾರ್ಮಿಕ ನಂಬಿಕೆ, ಪದ್ಧತಿ, ಆದರೊಂದಿಗೆ ಬಳವಳಿಯಾಗಿ ಬಂದ ಮೂಢ ನಂಬಿಕೆ, ಎಲ್ಲವನ್ನು ಆಚರಿಸಬೇಕು. ಹಾಗೇ ಅದರ ಬಲಿಪಶುಗಳು ಅವರಾಗಬೇಕು. ಹೇಗಿದೆ ವಿಪರ್ಯಾಸ!!

ಮಹಿಳೆಯರು ಹಲವಾರು ಕಾರಣಗಳಿಗಾಗಿ ಇಂತಹ ಮೌಢ್ಯಕ್ಕೆ ಬಲಿಯಾಗುತ್ತಾರೆ. ಅನಕ್ಷರತೆ, ತಿಳುವಳಿಕೆಯ ಕೊರತೆ, ಹಣಕಾಸಿನ ಕೊರತೆ, ಬಲವಾದ ಧಾರ್ಮಿಕ ನಂಬಿಕೆ, ಸಾಮಾಜಿಕ ವಿಚಾರ ಹೀಗೆ ಹಲವಾರು ಒತ್ತಡಗಳಿಗೆ ಒಳಗಾಗುತ್ತಾರೆ. ಕಾರಣಗಳಿಂದ ಅವರಲ್ಲಿರುವ ಮೂಢನಂಬಿಕೆ ಮೌಢ್ಯ ಅಜ್ಞಾನವನ್ನು ಹೆಚ್ಚಿಸುತ್ತಾ ಹೋಗುತ್ತದೆ. ಇದು ಹೆಚ್ಚಾದ ಹಾಗೆ ಒಂದು ವರ್ಗದ ಜನರಿಗೆ ಹೆಚ್ಚು ಗ್ರಾಮೀಣ ಮಹಿಳೆಯರಿಗೆ ಮಾತ್ರ ಸೀಮಿತವಾಗಿಲ್ಲ. ನಗರ ಪ್ರದೇಶದಲ್ಲಿರುವ ವಿದ್ಯಾವಂತ ಮಹಿಳೆಯರು ಇವುಗಳ ಬಲಿಪಶುವಾಗಿದ್ದಾರೆ. ವಿದ್ಯಾವಂತರಾದಷ್ಟು ಅದರಲ್ಲಿನ ಮೂಢನಂಬಿಕೆಗಳು ಬಲಿಯುತ್ತಾ ಹೋಗುತ್ತಿರುವುದು ಆಶ್ಚರ್ಯಕರ ಬೆಳವಣಿಗೆಯಾಗಿದೆ. ಇದು ಕೇವಲ ಒಂದು ಧರ್ಮದ ಜನರಿಗೆ ಸೀಮಿತವಾಗಿರದೆ ಎಲ್ಲ ಧರ್ಮದವರಿಗೂ ಅನ್ವಯಿಸುತ್ತಿರುವ ಕುತೂಹಲಕಾರಿ ಬೆಳವಣಿಗೆಯಾಗಿದೆ. ಸಾಯಿಬಾಬಾ, ಕಲ್ಕಿ, ಅಮ್ಮ, ಗ್ರಾಮೀಣ ಪ್ರದೇಶದಲ್ಲಿರುವ ಮೂಢ ನಂಬಿಕೆಗಳನ್ನು ಬಿತ್ತುವ ಸ್ವಾಮೀಜಿಗಳು ಕ್ರೈಸ್ತ ಪಾದ್ರಿಗಳು, ಅಂತ್ರ ತಂತ್ರ ಹಾಕುವವರು ಎಲ್ಲ ಧರ್ಮಗಳಲ್ಲೂ ಮೂಢ ನಂಬಿಕೆಗಳನ್ನು ಒಂದಾಗಿ ಬಿತ್ತುವುದು ಕಂಡು ಬರುತ್ತದೆ. ವಿಶೇಷವಾಗಿ ಮಹಿಳೆಯರು ತಮ್ಮ ಅಸಹಾಯಕ ಪರಿಸ್ಥಿತಿಯಿಂದಾಗಿ ಬಲಿಯಾಗುತ್ತಿರುವ ನಿದರ್ಶನಗಳು ನಮ್ಮ ಮುಂದೆ ಸಾಕಷ್ಟಿದೆ.

ಈ ಗಿರಿಜಮ್ಮ ಕೋಲಾರ ಜಿಲ್ಲೆಯ ಒಂದು ಹಳ್ಳಿಯಿಂದ ಬೆಂಗಳೂರಿಗೆ ಮದುವೆಯಾಗಿ ಬಂದವಳು. ಮದುವೆಯಾಗಿ ಎರಡು ಮೂರು ವರ್ಷಗಳಾಗಿದ್ದರೂ ಆಕೆಗೆ ಮಕ್ಕಳಾಗಿರಲಿಲ್ಲ. ಒಂದೆರಡು ಬಾರಿ ಆಕೆ ಡಾಕ್ಟರನ್ನು ನೋಡಿದರು. ಗಂಡನನ್ನು ಕರೆದುಕೊಂಡು ಬಾ ಎಂದು ವೈದ್ಯರು ಹೇಳಿದರು. ಆತ ಹೋಗಲು ಒಪ್ಪಲಿಲ್ಲ. ಅವಳ ಬಲವಂತಕ್ಕೆ ಒಮ್ಮೆ ಹೋದ. ನಂತರ ಗಂಡ ಆಸ್ಪತ್ರೆಗೆ ಹೋಗಲು ಒಪ್ಪಲಿಲ್ಲ. ಯಾರೋ ಆಕೆಗೆ ಪಟಾಲಮ್ಮನಿಗೆ ಹರಕೆ ಹೊರು ಎಂದರು. ಆಕೆ ವ್ರತವನ್ನು ಪ್ರಾರಂಭಿಸಿದಳು. ಪೂಜೆಗೆಂದು ಸಾಕಷ್ಟು ಹಣವನ್ನು ಖರ್ಚು ಮಾಡಿದರು. ಒಂದು ವರ್ಷದ ನಂತರ ಆಕೆ ಗರ್ಭಿಣಿಯಾದಳು. ಆಕೆಯ ವಯಸ್ಸು ಚಿಕ್ಕದಿದ್ದು ಆಕೆಯ ದೇಹ ಬೆಳವಣಿಗೆಯಾಗದೇ, ನಿಧಾನವಾಗಿರಬಹುದು. ಆದರೆ ಆಕೆ ಬಲವಾಗಿ ನಂಬಿದ್ದು, ಆ ಅಮ್ಮನಿಂದಲೇ ತನಗೆ ಮಗುವಾಗಿದೆಯೆಂದು ಮಗುವಿಗೆ ಕೂದಲು ತೆಗೆಸಲು ಸಾಲ ಸೋಲು ಮಾಡಿ ಕುರಿ ಕಡಿದು ಬಳಗದವರಿಗೆಲ್ಲ ಊಟ ಹಾಕಿದರು.

ರಾಧ ಎಸ್.ಎಸ್. ಎಲ್.ಸಿ. ಪಾಸಾಗಿದ್ದಾಳೆ. ತುಂಬಾ ಬುದ್ದಿವಂತೆ. ಕೆಲಸಕ್ಕೆ ಹೋಗುತ್ತಿರುವುದರಿಂದ ಹೊರಗಿನ ಪ್ರಪಂಚದ ಆಗುಹೋಗುಗಳ ಬಗ್ಗೆಯೂ ಸಾಕಷ್ಟು ಅರಿವಿದೆ. ದುಡಿದು ತಿನ್ನುವ ಕುಟುಂಬ. ಆಕೆಯ ಆರೋಗ್ಯ ಬೇರೆ ಸರಿ ಇರಲಿಲ್ಲ. ಆಕೆಯ ಗಂಡ ಇನ್ನೊಬ್ಬ ಹೆಂಗಸಿನ ಜೊತೆಗೆ ಸಲುಗೆಯಿಂದ ಇರತೊಡಗಿದ. ಗಂಡ - ಹೆಂಡತಿಯ ನಡುವೆ ಸದಾ ಜಗಳ. ಆಕೆಗೆ ಅಲರ್ಜಿಯ ಜೊತೆಗೆ ಹೊಟ್ಟೆ ನೋವು. ಡಾಕ್ಟರ್ ಬಳಿ ತೋರಿಸಿದಾಗ ಆಪರೇಶನ್ ಮಾಡಿಸಲೇಬೇಕೆಂದು ಹೇಳಿದರು. ಆಕೆಗೆ ದಿಕ್ಕು ತೋಚದಂತಾಯಿತು. ಗಂಡ ಕಿವಿ ಮೇಲೆ ಹಾಕಿ ಕೊಳ್ಳಲಿಲ್ಲ. ಆಪರೇಶನ್‌ಗೆ ಬೇಕಾದ ಹಣವನ್ನು ಹೊಂದಿಸುವ ಸ್ಥಿತಿಯಲ್ಲಿ ಅವರು ಇರಲಿಲ್ಲ. ಆಕೆ ಕೆಲಸಕ್ಕೆ ಹೋಗುವ ಸ್ಥಳದಲ್ಲಿ ಒಬ್ಬರು "ನೀವು ಚರ್ಚ್‌ಗೆ ಬನ್ನಿ. ಇಲ್ಲಿನ ಆಚರಣೆಯನ್ನು ಪಾಲಿಸಿ. ಏಸು ನಿಮ್ಮನ್ನು ಕೈಯನ್ನು ಬಿಡುವುದಿಲ್ಲ" ಎಂದು ಹೇಳಿದರು. ತನ್ನ ಕಷ್ಟಗಳಿಗಾಗಿ ಆಕೆ ಪೂಜಿಸದ ದೇವರಿಲ್ಲ. ಹರಕೆ ಕಟ್ಟದ ದೇವರುಗಳಿಲ್ಲ. ಇದನ್ನು ಮಾಡಿ ನೋಡುತ್ತೇನೆಂದು ಮನೆಯಲ್ಲಿ ಇದ್ದ ದೇವರುಗಳನ್ನು ಎತ್ತಿ ಇಡಲು ಕೈಯಲ್ಲಿನ ಬಳೆಗಳನ್ನು ತೆಗೆದಳು. ಹಣೆಗೆ ಕುಂಕುಮ ಹಚ್ಚುವುದನ್ನು ನಿಲ್ಲಿಸಿದಳು. ಸದಾ ಏಸುವನ್ನು ಆರಾಧಿಸಲು ತೊಡಗಿದ್ದ ಕ್ರಮೇಣ ಗಂಡ, ಅತ್ತೆಯರ ಮನಸ್ಸನ್ನು ಒಲಿಸಿ ಚರ್ಚ್‌ಗೆ ಹೋಗುವಂತೆ ಮಾಡಿದ್ದಲ್ಲದೆ ಬೇರೆಯವರ ವಾಸಿಯಾಗದ ಕಾಯಿಲೆಗಳು ವಾಸಿಯಾದದ್ದನ್ನು ಸಹ ಇತರರಿಗೆ ಹೇಳುತ್ತಾಳೆ.

ಸಾವಿತ್ರಿ ಗಾರ್ಮೆಂಟ್ಸ್‌ಗೆ ಕೆಲಸಕ್ಕೆ ಹೋಗುತ್ತಾರೆ. ಗಾರೆ ಕೆಲಸ ಮಾಡುವ ಗಂಡ ಇನ್ನೊಬ್ಬಳನ್ನು ಮದುವೆಯಾದ. ಈಕೆಗೆ ಮಕ್ಕಳಾಗಿರಲಿಲ್ಲ. ಗಂಡ ಈಕೆಯ ಮನೆಗೆ ಬರುವುದನ್ನೇ ಬಿಟ್ಟ. ಕೆಲವು ವರ್ಷಗಳು ಹೀಗೆ ಕಳೆದವು. ಕ್ರಮೇಣ ಪುನಃ ಈಕೆಯ ಮನೆಗೆ ಬರತೊಡಗಿದ. ತನಗೆ ಮಕ್ಕಳಾಗದ ಕಾರಣ ಬೇರೆಯವಳೊಂದಿಗೆ ಮದುವೆಯಾಗಿದ್ದಾನೆಂದು ನಂಬಿದ್ದಳು. ಆಕೆಯ ಸಮಸ್ಯೆಯನ್ನು ಕೇಳಿದವರೊಬ್ಬರು ಚರ್ಚ್‌ಗೆ ಬರುವಂತೆ ಹೇಳಿದರು. ಆಕೆ ಪ್ರತಿವಾರ ಚರ್ಚ್‌ಗೆ ಹೋಗತೊಡಗಿದಳು. ಆಕೆಗೂ ಮಗುವಾಯಿತು. ಆಕೆಗೆ ಮಗುವಾಗಿದ್ದೆ ಏಸುವಿನ ಕೃಪೆಯಿಂದ ಎಂದು ಆಕೆ ಹೇಳುತ್ತಾಳೆ. ಪ್ರತಿ ಕ್ರಿಶ್ಚಿಯನ್ ಹಬ್ಬಕ್ಕು ಚರ್ಚ್‌ಗೆ ಹೋಗುತ್ತಾಳೆ. ಆಕೆಯು ಕ್ರಿಶ್ಚಿಯನ್ ಆಗಿ ಮತಾಂತರವಾಗುತ್ತಿದ್ದಳು. ಆದರೆ ಆಕೆಯ ಗಂಡ ಎರಡು ಮದುವೆಯಾಗಿರುವುದರಿಂದ ಮತಾಂತರವಾಗಲು ಸಾಧ್ಯವಿಲ್ಲ. ಹಾಗಾಗಿ ಹಿಂದೂ ಹಾಗೂ ಕ್ರಿಶ್ಚಿಯನ್ ಹಬ್ಬ ಎರಡನ್ನೂ ಮಾಡುತ್ತಾಳೆ.

ವನಜ ವಿದ್ಯಾವಂತೆ. ಪದವೀಧರೆ. ಲಂಬಾಣಿ ಜನಾಂಗಕ್ಕೆ ಸೇರಿದ ಮಹಿಳೆ. ಸಾಕಷ್ಟು ವ್ಯವಹಾರ ಜ್ಞಾನ, ತಿಳುವಳಿಕೆ ಇರುವವಳು. ಆಕೆಯು ಕಾಲೇಜಿಗೆ ಹೋಗುವಾಗ, ಆಕೆಯನ್ನು ಚರ್ಚ್‌ಗೆ ಕರೆಯುತ್ತಿದ್ದರು. ಆಕೆ ಹಾಗೆ ಚರ್ಚ್‌ಗೆ ಹೋಗುವ ರೂಢಿ ಮಾಡಿಕೊಂಡಿದ್ದಳು. ಕ್ರಿಶ್ಚಿಯನ್ ಸಿಸ್ಟರ್ಸ್, ಆಕೆಯ ಮನವೊಲಿಸಿದ್ದರು. ಹಾಗಾಗಿ ಬೆನ್‌ಹಿನ್ ಕಾರ್ಯಕ್ರಮಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಮಹಿಳೆಯರ ಜೊತೆಯಲ್ಲಿ ಆಕೆಯೂ ಹೋಗಿದ್ದಳು. ಆಕೆಯ ಮನೆಯ ಗೋಡೆಯ ಮೇಲೆ, ಏಸು ಕ್ರಿಸ್ತನ ಫೋಟೋ ಜೊತೆಗೆ ಬೆನ್‌ಹಿನ್ ಕ್ಯಾಲೆಂಡರ್ ಸಹ ಹಾಕಿದ್ದರು. ಆಕೆ ಭೇಟಿಯಾದಾಗ ಬೆನ್‌ಹಿನ್ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದನ್ನು ಹೆಮ್ಮೆಯಿಂದ ಹೇಳತೊಡಗಿದಳು. ಮಾತನಾಡುತ್ತಾ ನಾನು ಮತಾಂತರವಾಗಬೇಕೆಂದು ಅಂದುಕೊಂಡಿದ್ದೇನೆ ಎಂದಳು.

ನಾನು ಕೇಳಿದೆ "ಯಾಕೆ".

ಆಕೆ, "ಕಾರಣ ಇಲ್ಲ, ನನಗೆ ಇಷ್ಟ" ! ಎಂದರು.

"ಏನಾದ್ರು ಕಾರಣ ಇರಬೇಕಲ್ಲ. ನೀವು ಆರಾಧಿಸುವ ಸೇವಾಲಾಲ್ ಬಗ್ಗೆ ನಿನಗೆ ಭಕ್ತಿ ಇಲ್ಲವೆ?"

ಆಕೆ "ಹಾಗಲ್ಲ. ಆದ್ರೆ ನಾನು ಇದುವರೆಗೂ ಯಾಕೆ ಅಂತ ವಿಚಾರ ಮಾಡ್ಲಿಲ್ಲ. ಆ ಪ್ರಶ್ನೆಯನ್ನು ನಾನು ಇದುವರೆಗೂ ನನಗೆ ಕೇಳಿಕೊಳ್ಳಲಿಲ್ಲ" ಎಂದರು

"ಅಯ್ಯೋ ನಿನಗೆ ಬಿಟ್ಟಿದ್ದು. ಆದ್ರೆ ಯಾಕೆ ಅಂತ ವಿಚಾರ ಮಾಡುವುದು ಬೇಕಲ್ಲವೆ ? "ಎಂದೆ.

ಆಕೆ "ಹೌದು, ತಪ್ಪಿಲ್ಲ ಆದ್ರೆ ನಾನು ಆಲೋಚಿಸಿಲ್ಲ"ಎಂದಳು.

ಹೀಗೆ ಹಲವಾರು ಜನರೊಂದಿಗೆ ಮಾತನಾಡುತ್ತಿದ್ದರೆ, ಒಂದೆರಡು ವಿಚಾರಗಳು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಕೆಳಜಾತಿಯ ಜನರಲ್ಲಿ ಅವರ ದೇವರು, ನಡೆ - ನುಡಿ, ಆಚಾರ - ವಿಚಾರಗಳ ಬಗ್ಗೆ ಕೀಳರಿಮೆಯನ್ನು ಮೇಲ್ಜಾತಿಯ ಧರ್ಮ, ನಡೆ - ನುಡಿ, ಆಚರಣೆಯಿಂದ ಬೆಳೆಸಲಾಗಿದೆ.

ಹಾಗಾಗಿಯೇ ಉಪಜನಾಂಗಗಳು ತಮ್ಮ ಧರ್ಮ, ನಡೆ - ನುಡಿ, ಆಚಾರ - ವಿಚಾರಗಳನ್ನು ಒಂದಾಗಿ ಸಮರ್ಥಿಸಿಕೊಳ್ಳುವುದು ಅಸಾಧ್ಯವಾಗಿದೆ. ಇದನ್ನು ಹಿಂದೂ ಧರ್ಮದ ಮೇಲ್ಜಾತಿಗಳು ಕಾರಣವಾಗುವಷ್ಟೇ ಕ್ರಿಶ್ಚಿಯನ್ ಧರ್ಮವೂ ಕಾರಣವಾಗುತ್ತವೆ. ಎರಡು ಮೇಲರಿಮೆಯ ತತ್ವದ ಮೇಲೆಯೇ ಕೆಲಸ ಮಾಡುತ್ತವೆ.

ಹಿಂದೂ ಧರ್ಮದಲ್ಲಿನ ಜಾತೀಯತೆ, ಧಾರ್ಮಿಕ ಅಸಮಾನತೆಯ ಜೊತೆಗೆ ಮೂಢನಂಬಿಕೆಗಳ ಜೊತೆಗೆ, ವ್ಯವಸ್ಥೆಯಲ್ಲಿ ಕಂಡು ಬರುವ ಬಡನತ, ಅಸಹಾಯಕತೆ ಮುಂತಾದವು ಜನರಲ್ಲಿನ ವಿಚಾರ ಮಾಡುವ ಚೈತನ್ಯವನ್ನು ಕೊಂದು ಹಾಕುತ್ತಿದೆ. ಇಂತಹ ದುರ್ಬಲ ಅಂಶಗಳನ್ನು ಕ್ರೈಸ್ತಮತ ಪ್ರಚಾರಕರು ಉಪಯೋಗಿಸಿಕೊಳ್ಳುತ್ತಾರೆ. ಅದರ ಮೂಲಕ ಅವರು ಮೂಢ ನಂಬಿಕೆ, ಅಜ್ಞಾನ, ಮೌಢ್ಯವನ್ನು ಜನರಲ್ಲಿ ಬಿತ್ತಿ ಅವರವರ ಲಾಭವನ್ನು ಅವರು ಪಡೆಯುತ್ತಿದ್ದಾರೆ.

**- ಹೆಚ್. ಎಸ್.ರಾಜೇಶ್ವರಿ**

# ಶಿವರಾಮ ಕಾರಂತರ ಕಾದಂಬರಿಗಳಲ್ಲಿ ತಾಯಿ

ಸ್ತ್ರೀ - ಪುರುಷ ಸಮಾನತೆಯ ಹೋರಾಟದ ಹಾದಿಯಲ್ಲಿ ಇಂದಿನ ಸಮಾಜವು ಬಹಳಷ್ಟು ಮುಂದುವರಿದಿದೆ. ಇಂತಹ ಸಂದರ್ಭದಲ್ಲಿ ಕಾರಂತರ ಕಾದಂಬರಿಗಳಲ್ಲಿ ಅಂತಹ ಗಂಭೀರ ಚಿಂತನೆಗಳಿವೆ ಎಂದೆನ್ನಿಸದಿದ್ದರೂ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಾಲಘಟ್ಟದ ನಿಕಟ ಸಂದರ್ಭಗಳಲ್ಲಿ ಕಾರಂತರು ತಮ್ಮ ಅನುಭವದ ವ್ಯಾಪ್ತಿಯಲ್ಲಿ ಸ್ತ್ರೀ ಪಾತ್ರಗಳನ್ನು, ಅದರಲ್ಲೂ ತಾಯಿಯ ಪಾತ್ರಗಳ ಮೂಲಕ ಆಶಿಸುವ ಮತ್ತು ರೂಪಿಸುವ ಸಂಸ್ಕೃತಿ ಪರವಾದ ಜೀವನ ಮೌಲ್ಯಗಳ ರಕ್ಷಣೆಯ ಕಾಳಜಿ ಅನನ್ಯವಾದುದು ಮತ್ತು ಪ್ರಗತಿಗಾಮಿಯಾದುದು. ಮತ್ತು ಅಂತಹ ಸಂಸ್ಕೃತಿನಿರ್ಮಾಣವು ಹೆಣ್ಣಿನಿಂದಲೇ ಸಾಧ್ಯ ಎನ್ನುವ ಸ್ತ್ರೀಪರ ನಿಲುವು ನೈತಿಕತೆಗಿಂತ, ಸಂಕೀರ್ಣ ಮಾನವ ಸಂಬಂಧಗಳಲ್ಲಿ ಮನಸ್ಸು ಶೋಧನೆಗೊಳಗಾಗಿ ಕಂಡುಕೊಳ್ಳುವ ತನ್ನದೇ ಆದ ಸಮಾಧಾನ, ತೃಪ್ತಿಗಳೇ ಮುಖ್ಯವಾಗುತ್ತವೆ.

ಭಾರತೀಯ ಕೌಟುಂಬಿಕ ವ್ಯವಸ್ಥೆಯಲ್ಲಿ ತಂದೆ - ತನ್ನ ಮಕ್ಕಳ ಪೋಷಣೆ, ರಕ್ಷಣೆಯಲ್ಲಿ ತಾಯಿಯೊಂದಿಗೆ ಸಮಭಾಗಿಯಾಗಿ, ಜವಾಬ್ದಾರಿ ಹೊರಬೇಕಾದವ. ಕಾರಂತರ ಕಾದಂಬರಿಗಳ ತಂದೆ ಒಂದೋ ತನ್ನದೇ ಆದ ಕೆಲವು ವಿಚಿತ್ರ ಧೋರಣೆಗಳಿಗೆ ಅಂಟಿಕೊಂಡಿರುತ್ತಾನೆ. ಹಾಗಾಗಿ ಆತ ಮಕ್ಕಳಿಗೆ ಸಹಜವಾಗಿ ಪ್ರೀತಿ ವಾತ್ಸಲ್ಯ ತೋರುವುದಿಲ್ಲ. (ಉದಾಹರಣೆಗೆ "ಕನ್ನಡಿಯಲ್ಲಿ ಕಂಡಾತ" ಕಾದಂಬರಿಯಲ್ಲಿ ತನ್ನ ಹೆಂಡತಿ, ಮಕ್ಕಳ ಪ್ರತಿಯೊಂದು ಕಾರ್ಯವನ್ನು ತನಗೆ ವಿರೋಧವೆಂದು ತಪ್ಪು ತಿಳಿಯುವ ಪರಮೇಶ್ವರನ ಪಾತ್ರ).

"ಮೈ ಮನಗಳ ಸುಳಿಯಲ್ಲಿ" ಕಾದಂಬರಿಯ ರಾಮಪ್ಪಯ್ಯ ಅಡಿಗರು ತಾವರೆಲೆಯ ಮೇಲಿನ ನೀರಿನಂತೆ ಸಂಸಾರದೊಳಗಿದ್ದುಕೊಂಡೂ ಇಲ್ಲದಂತೆ ವರ್ತಿಸುತ್ತಾರೆ. ಈ ರೀತಿಯಲ್ಲಿ ತಂದೆಯಾದವ ಒಂದೋ ಕೌಟುಂಬಿಕ ಹೊಣೆಯಿಂದ ಪಲಾಯನ ಹೂಡುವಾತ ಇಲ್ಲವೇ ಅವರ ಮೇಲೆ ನಿಜವಾದ ಪ್ರೀತಿ ಇರಿಸಿಕೊಂಡರೂ ಅವರ ಉದರಪೋಷಣೆಗೆ, ಶಿಕ್ಷಣಕ್ಕೆ ಬೇಕಾದ ಆರ್ಥಿಕ ನೆರವನ್ನು ಒದಗಿಸಲಾರದ ಅಸಹಾಯಕ ವ್ಯಕ್ತಿಯಾಗಿರುತ್ತಾನೆ ಅಥವಾ ತನ್ನ ಮಕ್ಕಳು ವಯಸ್ಸಿಗೆ ಬರುವ ಮೊದಲೇ ಅನಾರೋಗ್ಯದಿಂದಲೋ ಇನ್ನಾವುದೋ ಸಹಜ ಕಾರಣಗಳಿಂದಲೋ ಮರಣ ಹೊಂದಿರುತ್ತಾನೆ. ಉದಾಹರಣೆಗೆ "ಮುಗಿದ ಯುದ್ಧದ" ಅಚ್ಯುತನ ತಂದೆಯಂತಹ ವ್ಯಕ್ತಿಗಳು.

ಮೇಲೆ ಹೇಳಿದ ಎಲ್ಲ ಸಂದರ್ಭಗಳಲ್ಲಿ ಕಾರಂತರ ಕಾದಂಬರಿಗಳ ತಾಯಿ ತನ್ನ ಮಕ್ಕಳನ್ನು ಬೆಳೆಸುವುದರಿಂದ ಹಿಡಿದು ಬದುಕಿನ ಹೋರಾಟಕ್ಕೆ ತಯಾರಾಗಿಸುವ ಪ್ರಯತ್ನದಲ್ಲಿ ನಾನಾ ಬಗೆಯ ಕಷ್ಟ ಕೋಟಲೆಗಳಿಗೆ ಮುಖಾಮುಖಿಯಾಗುತ್ತಾಳೆ. ನಿಸರ್ಗದೊಂದಿಗೆ ಹೋರಾಡುತ್ತಾ ಸ್ವಸಂತೃಪ್ತ ಜೀವನ ನಡೆಸಲು ಗತಸಾಹಸ ಮಾಡುತ್ತಾಳೆ. ಅನಕ್ಷರಸ್ಥೆಯರಾಗಿರುವ ಹೆಚ್ಚಿನವರು ಜೀವನ ನಿರ್ವಹಣೆಗೆ ಕೃಷಿಯನ್ನೇ ಅವಲಂಬಿಸಿ ಬದುಕಬೇಕಾದುದು ಅನಿವಾರ್ಯವಾಗಿರುತ್ತದೆ. ಜೊತೆಗೆ ಹೆಣ್ಣು ನೌಕರಿಗೆ ಹೋಗುವ ವಿಷಯದ ಕುರಿತು ಅಂದಿನ ಸಮಾಜದಲ್ಲಿ ಅಂತಹ ಸ್ವಾತಂತ್ರ್ಯವಿದ್ದಂತೆ ಕಾಣಸದು (ಕಾರಂತರು

ಸಹಾನುಭೂತಿಯಿಂದ ಚಿತ್ರಿಸಿರುವ "ಅಳಿದ ಮೇಲೆ" ಕಾದಂಬರಿಯ ಇಂದುಮತಿಯಂತಹ ಪಾತ್ರಗಳನ್ನು ಹೊರತುಪಡಿಸಿ). ಹಾಗಾಗಿಯೇ ಕಾರಂತರ ಕಾದಂಬರಿಗಳಲ್ಲಿ ಪತಿಯಿಂದ ಪರಿತ್ಯಕ್ತಳಾಗುವ ಹೆಣ್ಣು ಎಲ್ಲೂ ಗಂಡ ಬಿಟ್ಟವಳೆಂದು ಜರೆಯಲ್ಪಡುವುದಿಲ್ಲ. ಬದಲಾಗಿ ಸಮಾಜದ ಜನರಿಂದ ಸಹಾನುಭೂತಿ ಗಳಿಸುತ್ತಾಳೆ. ಸಮಾಜದ ಶ್ರೇಣೀಕೃತ ವ್ಯವಸ್ಥೆಯಲ್ಲಿ ಉನ್ನತ ಸ್ಥಾನದಲ್ಲಿರುವ ವರ್ಗವೊಂದರಿಂದ ಬಂದರೂ ಹೆಚ್ಚಾಗಿ ಅವಿದ್ಯಾವಂತರಾಗಿರುವ ಕಾರಂತರ ಕಾದಂಬರಿಗಳ ತಾಯಂದಿರು ಸಾಂಪ್ರದಾಯಿಕವಾದ ಸಮಾಜ ವ್ಯವಸ್ಥೆಯನ್ನು ಒಪ್ಪಿಕೊಂಡೇ ಜೀವನ ನಡೆಸುವುದು ಅತ್ಯಂತ ಸಹಜವೇ ಆಗಿದೆ.

ಪ್ರಸ್ತುತ ಗಣನೆಗೆ ತೆಗೆದುಕೊಂಡ ತಾಯಿ ಪಾತ್ರಗಳನ್ನು ನಾಲ್ಕು ಗುಂಪುಗಳಲ್ಲಿ ವಿಭಾಗಿಸಿಕೊಂಡಿದೆ. ಮೊದಲ ಗುಂಪಿನಲ್ಲಿ "ಮರಳಿ ಮಣ್ಣಿಗೆ"ಯ ಪಾರೋತಿ, ಸತ್ಯಭಾಮೆ, ನಾಗವೇಣಿಯರಂಥ ಕೃಷಿಕ ಹೆಣ್ಣುಗಳ ಪ್ರಾತಿನಿಧಿಕವಾಗಿ ಬಂದರೆ, ಎರಡನೆಯ ಗುಂಪಿನಲ್ಲಿ "ವ್ಯೆಮನಗಳ ಸುಳಿಯಲ್ಲಿ" ಕಾದಂಬರಿಯ ಶಾರಿಯಂತಹ ವೃತ್ತಿನಿರತ ಅಥವಾ "ಕನ್ಯಾಬಲಿ"ಯ ಮಾಲತಿಯಂಥ ಸಂದರ್ಭದ ಒತ್ತಡಕ್ಕೆ ಸಿಲುಕಿ ವೇಶ್ಯೆಯರಾದ ಮಹಿಳೆಯರು ಬರುತ್ತಾರೆ. ಮೂರನೆಯ ಗುಂಪಿನಲ್ಲಿ "ಇದ್ದರೂ ಚಿಂತೆ" ಮತ್ತು "ಇನ್ನೊಂದೇ ದಾರಿ"ಯ ಸಾವಿತ್ರಿ ಹಾಗೂ ಚಂಪೆಯರಂತಹ ತೀರಾ ವ್ಯಾವಹಾರಿಕರಾದ ಸುಶಿಕ್ಷಿತೆಯರಿದ್ದಾರೆ. ಇವರು ವಿದ್ಯಾವಂತೆಯರಾದರೂ ಆ ವಿದ್ಯೆ ಅವರಲ್ಲಿ ಜಗತ್ತಿನ ವಾಸ್ತವದ ಕುರಿತು ತಿಳುವಳಿಕೆಯನ್ನು ಹೆಚ್ಚಿಸಿಲ್ಲ. ಬದಲಾಗಿ ಅಹಂಕಾರಿಗಳನ್ನಾಗಿ ಮಾಡಿದೆ. ಕೊನೆಯ ಗುಂಪಿನಲ್ಲಿ ಜೀವನ ಮೌಲ್ಯಗಳ ಕುರಿತು ಅತ್ಯಂತ ಸಂವೇದನಾಶೀಲರಾದ "ಇನ್ನೊಂದೇ ದಾರಿ"ಯ ಹೊನ್ನಿ, "ಧರ್ಮರಾಯನ ಸಂಸಾರ"ದ ಮಹಾಲಕ್ಷ್ಮಿ, "ಕರುಳಿನ ಕರೆ"ಯ ಭಾಗೀರಥಿಯರಂತಹ ಹೆಣ್ಣುಗಳಿದ್ದಾರೆ. ಈ ಎಲ್ಲ ವಿಭಿನ್ನ ಸಾಮಾಜಿಕ ಪರಿಸರದಿಂದ ಬಂದ ವಿಭಿನ್ನ ಧೋರಣೆಗಳನ್ನು ಹೊಂದಿದ ತಾಯಂದಿರು ಮಕ್ಕಳ ಬದುಕು ತಮ್ಮದಾಗಿರುವವರೆಗೆ ಅದನ್ನು ನಿರ್ವಹಿಸಿದ ರೀತಿ, ಪಡೆದ ಸಾಫಲ್ಯದ ಮಟ್ಟವೂ ವಿಭಿನ್ನವೇ ಆದುದು.

ಹೆಣ್ಣು ತಾನು ಸ್ವತಃ ಹಡೆದೇ ತಾಯಿಯಾಗಬೇಕಿಲ್ಲ. ತನ್ನದಲ್ಲದ ಯಾವುದೇ ಮಕ್ಕಳನ್ನು ಆಕೆ ಪ್ರೀತಿಸಬಹುದು. ವಾತ್ಸಲ್ಯ ತೋರಬಹುದು. ತನ್ನದೇ ಮಕ್ಕಳನ್ನು ಪ್ರೀತಿ ತೋರಿಸದೆ ವಂಚಿಸಲೂಬಹುದು. ಯಾವುದೇ ಆರ್ಥಿಕ ಆಧಾರವಿಲ್ಲದಿದ್ದಾಗಲೂ, ತನ್ನ ಪತಿಯನ್ನೇ ಅವಲಂಬಿಸಬೇಕಾಗಿರುವ ಸನ್ನಿವೇಶದಲ್ಲೂ ಜೀವನಪರವಾದ ಗಟ್ಟಿ ನಿಲುವನ್ನು ಕಾರಂತರ ಕಾದಂಬರಿಗಳ ತಾಯಂದಿರು ಪ್ರದರ್ಶಿಸುತ್ತಾರೆ. ಗಂಡನಾದವನಿಗೆ ವಿವಾಹಬಾಹಿರ ಸಂಬಂಧವಿರುವುದರ ಅರಿವಿದ್ದೂ ಅದನ್ನು ಸಹಿಸಿಕೊಳ್ಳುವ ಪ್ರಸಂಗಗಳು ಇಂತಹ ಲಂಪಟನತನವನ್ನು ಮೀರಿದ ಪುರುಷನ ಸ್ವಾರ್ಥ - ಕ್ರೌರ್ಯ ಗುಣವನ್ನು ಹೆಣ್ಣು ತನ್ನ ಬದುಕಿಗಿಂತ ಹೆಚ್ಚಾಗಿ ತನ್ನ ಮಕ್ಕಳ ಬದುಕಿಗೆ ಸ್ಪಂದಿಸುವ ಸ್ವಾರ್ಥವನ್ನು ಮೀರಿದ ಆಕೆಯ ಔದಾರ್ಯವನ್ನೂ ಎತ್ತಿ ಹೇಳುತ್ತವೆ. ಸ್ತ್ರೀಮನಸ್ಸುಗಳು ಪುರುಷನ ಇಂತಹ ದುರುಳತನವನ್ನು ವಿರೋಧಿಸುವ ಅವಕಾಶಕ್ಕಾಗಿ ಕಾಯುತ್ತವೆ, ಸಿಡಿದೇಳುತ್ತವೆ. ಈ ಮಾತಿಗೆ ನಿದರ್ಶನವಾಗಿ "ಧರ್ಮರಾಯನ ಸಂಸಾರ"ದ ಮಹಾಲಕ್ಷ್ಮಿ ತನ್ನ ಗಂಡನ ಸಂದರ್ಭದಲ್ಲಿ ವರ್ತಿಸುವ ರೀತಿ ಹಾಗೂ "ಕರುಳಿನ ಕರೆ"ಯ ಭಾಗೀರಥಿ ನಡುವಯಸ್ಸಿನಲ್ಲಿ ಗಂಡನಿಂದ ದೂರಾಗುವ ಪ್ರಸಂಗಗಳಿಗೆ ಅವರು ತಮ್ಮ ದೀರ್ಘಕಾಲದ ದಾಂಪತ್ಯಜೀವನದಲ್ಲಿ ತಂತಮ್ಮ ಗಂಡಂದಿರಿಂದ ಅನುಭವಿಸಿದ ತೊಳಲಾಟ, ಮಾನಸಿಕ ಹಿಂಸೆಗೆ ಒಡ್ಡುವ ಪ್ರತಿರೋಧಗಳೇ ಆಗಿವೆ. "ಮರಳಿ ಮಣ್ಣಿಗೆ"ಯ ರಾಮೈತಾಳರ ಮಡದಿ ಪಾರೋತಿಯ ಲಚ್ಚ ತನ್ನ ಸವತಿಯ ಮಗ ಎಂಬುದನ್ನು ಮರೆತು ಅವನ ಹಡೆದ ತಾಯಿ ಸತ್ಯಭಾಮೆಗಿಂತಲೂ ಹೆಚ್ಚು ಅವನನ್ನು ಹಚ್ಚಿಕೊಳ್ಳುತ್ತಾಳೆ. ಆದರೆ ನೈತಿಕ ಮೌಲ್ಯಗಳನ್ನು ಗೌರವಿಸುವ ಒಬ್ಬ ವ್ಯಕ್ತಿಯನ್ನಾಗಿ ಅವನನ್ನು ರೂಪಿಸುವಲ್ಲಿ ಅವರಿಬ್ಬರೂ ವಿಫಲರಾಗುತ್ತಾರೆ. ಹಾಗಾಗಿ ಸಹಜ ಸಾಂಸಾರಿಕ ಬದುಕಿಗೆ ಲಚ್ಚ ಬೆನ್ನು ತೋರಿಸುವಂತಾಗುತ್ತಾನೆ. ಸಾಕುತಾಯಿ ಪಾರೋತಿ ತೋರಿಸುವ ಪ್ರೀತಿಗಿಂತ ಒಂದು ತೂಕ ಹೆಚ್ಚಾಗಿಯೇ ಹೆತ್ತ ತಾಯಿಯಾದ ತಾನು ಪ್ರೀತಿಸಬೇಕೆಂಬ ಸತ್ಯಭಾಮೆಯ ಈರ್ಷೆಯ ಹಾಗೂ ಸ್ಪರ್ಧೆಯ ಮನೋಭಾವ ಹಾಗೂ ಆರಂಭದಿಂದಲೂ ಸವತಿಯರಾದ ಪಾರೋತಿ ಹಾಗೂ ಸತ್ಯಭಾಮೆಯಲ್ಲಿ ಒಡಮೂಡದ ಸಾಮರಸ್ಯದ ಕೊರತೆಯೂ ಇದಕ್ಕೆ ಪರೋಕ್ಷವಾದ ಕಾರಣವಿರಬಹುದು.

"ಇನ್ನೊಂದೇ ದಾರಿ"ಯ ಹೊನ್ನಿ ತನ್ನ ಗಂಡನಿಂದ ಸಲ್ಲದ ಅವಗಣನೆಗೆ ಒಳಗಾಗಿ ಮುಂದೆ ಆತ ತೀರಿಕೊಂಡಾಗ ತನ್ನ

ಮಗ ಮಾದೇವನನ್ನು ರೂಪಿಸಿದ ಬಗೆ ಅಪೂರ್ವವಾದುದು. ಆರ್ಥಿಕವಾಗಿ ಅತ್ಯಂತ ಸಂಕಷ್ಟಕ್ಕೆ ಒಳಗಾದ ದಿನಗಳಲ್ಲಿ ಮಾದೇವ ದಾರಿಯಲ್ಲಿ ಬಿದ್ದು ಸಿಕ್ಕಿದ ಒಂದು ತೆಂಗಿನಕಾಯಿಯನ್ನು ಮನೆಗೆ ತರುತ್ತಾನೆ. ಅದನ್ನು ತಾಯಿ ಹೊನ್ನಿ ಕೈಯಲ್ಲಿ ಹಿಡಿದುಕೊಂಡು ಇದೇನು ಮಾಣಿ! ಸಿಪ್ಪೆ ಸುಲಿಯದ ಕಾಯಿ ಎಲ್ಲಿಂದ ತಂದೆ ? ಯಾರು ಕೊಟ್ಟರು ? ಎಂದು ಕೇಳಿದಾಗ ಮಾದೇವನ ಎದೆ ಧಸಲ್ಲೆಂದಿತ್ತು. ಅಮ್ಮನ ಮುಖ ಹುಲಿಯ ಮುಖವಾದುದೂ ಕಾಣಿಸಿತು ಎಂಬಲ್ಲಿ ಐವರು ಮಕ್ಕಳ ತಂದೆಯಾದ ಮಾದೇವ ಅಪರಾಧಿಯಂತೆ ನಡುಗುವಲ್ಲಿ, ಮಗುವಿನಂತೆ ವರ್ತಿಸುವಲ್ಲಿ ಅವನೊಳಗೆ ಸುಪ್ತವಾಗಿದ್ದ ನೈತಿಕ ಪ್ರಜ್ಞೆ ತಮ್ಮದಲ್ಲದ ವಸ್ತುವನ್ನು ಕೈಯೆತ್ತಿ ಕೊಟ್ಟ ಹೊರತು ಪರರದ್ದೇ ಎಂದು ಭಾವಿಸುವ ಧೋರಣೆಯನ್ನು ರೂಪಿಸಿದ ಮಾನಸಿಕ ಅಂಶ ನಿಜಕ್ಕೂ ಅನನ್ಯವಾದದ್ದು. ಹೊನ್ನಿ ವಿದ್ಯಾವಂತೆಯಲ್ಲ, ಪ್ರಾಯಪ್ರಬುದ್ಧನಾದ ಮಗನನ್ನು ಭೀತಿಗೊಳಪಡಿಸಿ ಅಂಕೆಯಲ್ಲಿ ಇಟ್ಟುಕೊಳ್ಳಬಲ್ಲ ವ್ಯಕ್ತಿತ್ವವೂ ಆಕೆಯದಲ್ಲ. ಆದರೂ ತಾಯಿ ತನ್ನನ್ನು ಬೆಳೆಸಲು ಪಟ್ಟ ಪಾಡಿನ, ಆಕೆ ತನ್ನಲ್ಲಿ ಬೆಳೆಸಿದ ನೈತಿಕತೆಯ ಅರಿವಿದ್ದ ಮಾದೇವನಂತಹ ಯಾವನೇ ಮಗ ತನ್ನ ತಪ್ಪನ್ನು ಮಗುವಿನಂತೆ ಒಪ್ಪಿಕೊಳ್ಳುವ ಸತ್ಯಪ್ರೀತಿಯ ವ್ಯಕ್ತಿಯೇ ಆಗುತ್ತಾನೆ, ಇಂತಹ ವ್ಯಕ್ತಿತ್ವವನ್ನು ರೂಪಿಸಲು ತಾಯಿಯಾದವಳಿಗೆ ಯಾವ ಪದವಿಯ, ಆರ್ಥಿಕ ಬಲದ ಅಗತ್ಯವೂ ಇಲ್ಲ (ಹಾಗಾಗಿ ಆರ್ಥಿಕ ಬಲವುಳ್ಳ "ಅಳಿದ ಮೇಲೆ"ಯ ಕಮಲಳ ಬಗ್ಗೆ ಕಾದಂಬರಿಯಲ್ಲಿ ಸಹಾನುಭೂತಿ ಇಲ್ಲ, "ಇದ್ದರೂ ಚಿಂತೆ"ಯ ಸಾವಿತ್ರಿಯನ್ನು ಅವಳ ಮಗ ಗೌರವಿಸುವುದಿಲ್ಲ) ಆಕೆ ತಾನು ಒಪ್ಪಿದ ಮೌಲ್ಯಗಳಿಗೆ ಬದ್ಧಳಾಗಿ ನಡೆದು ತೋರಿಸುವುದೇ ತನ್ನ ಮಕ್ಕಳಿಗೆ ಕಲಿಸಬಹುದಾದ ಪಾಠ. ಸ್ವತಃ ಕಾರಂತರು ತಮ್ಮ ನಡೆನುಡಿಗಳಲ್ಲಿ ಸಾಮರಸ್ಯವನ್ನು ಹೆಜ್ಜೆ ಹೆಜ್ಜೆಗೂ ತೋರಿಸಿದವರು. ಅವರ ಸ್ಮೃತಿಪಟಲದಿಂದ ಆತ್ಮಕಥನವನ್ನು ಓದಿದಾಗ, ಅವರು ತಮ್ಮ ತಾಯಿ ಮತ್ತು ಅಜ್ಜಿಯರಲ್ಲಿ ತೋರುವ ಗೌರವದ ಪ್ರತಿಬಿಂಬವನ್ನು ಅವರ ಕಾದಂಬರಿಗಳ ತಾಯಿಯರ, ವೃದ್ಧೆಯರ ಪಾತ್ರಗಳಲ್ಲಿ ಕಾಣಬಹುದಾಗಿದೆ.

"ಕನ್ನಡಿಯಲ್ಲಿ ಕಂಡಾತ" ಕಾದಂಬರಿಯ ಕಾವೇರಿಯ ಗಂಡ ಸುಶಿಕ್ಷಿತ ಶಾಲಾಮಾಸ್ತರನಾದ ಪರಮೇಶ್ವರ. ಆತನ ಅಹಮಿಕೆಯ ನಡವಳಿಕೆ, ಆತ ತನ್ನ ಜೊತೆಯಲ್ಲಿ ಇರಿಸಿಕೊಂಡ ಒಂದು ಬಗೆಯ ಅಂತರ ಉಳಿಸಿಕೊಳ್ಳುವ ನಡವಳಿಕೆಯಿಂದ ಕಾವೇರಿ ಬೇಸತ್ತವಳು. ಮುಂದೆ ನಿಷ್ಕಾರಣವಾಗಿ ಆತ ತನ್ನ ಅತಿನಿರೀಕ್ಷೆಗಳಿಗೆ ಬಾಹ್ಯಕಾರಣಗಳೇ ಪ್ರೇರಣೆಗಳಾಗಿ ಕೌಟುಂಬಿಕ ಬದುಕಿಗೆ ವಿಮುಖವಾಗುತ್ತಾನೆ. ಹಾಗೆ ದೂರಹೋಗಿ ಪತ್ನಿಗೆ ಬುದ್ಧಿಕಲಿಸುವೆನೆಂದುಕೊಳ್ಳುತ್ತಾನೆ. ಮನೆಬಿಟ್ಟು ಹೋದ ಆತನಿಂದ ಬಂದ ಅಹಂಕಾರಭರಿತ ಪತ್ರವು ತನ್ನನ್ನು ಅವನೆದುರು ಅಂಗಲಾಚುವಂತೆ ಮಾಡುವ ನಿರೀಕ್ಷೆ ಹೊತ್ತಿದ್ದರೂ ಅದಕ್ಕೆ ಸೊಪ್ಪು ಹಾಕದೆ ಕಾವೇರಿ ಒಂಟಿಯಾಗಿ ಬದುಕನ್ನೆದುರಿಸುತ್ತಾಳೆ. ಮಕ್ಕಳನ್ನು ಬೆಳೆಸುತ್ತಾಳೆ. ಆದರೆ ಹೆಂಡತಿಗೆ ಬುದ್ಧಿ ಕಲಿಸುತ್ತೇನೆಂದು ಹೋದ ಪತಿ ಪರಮೇಶ್ವರ ತಾನೇ ಬದುಕಿನ ಸಂಕಷ್ಟಗಳಿಗೆ ಮುಖಾಮುಖಿಯಾಗಿ ತೊಳಲಾಡಬೇಕಾಗುತ್ತದೆ.

ತನಗೆ ಸಹಜವಾದ ವಾತ್ಸಲ್ಯಗುಣದಿಂದ, ಆದುನಿಕತೆಯ ಮೋಹದಲ್ಲಿ ಕಳೆದುಹೋದ ತನ್ನ ಮಗನನ್ನು ನಿರೂಪಕನಲ್ಲಿ ಕಾಣುವ "ಬೆಟ್ಟದ ಜೀವ"ದ ಶಂಕರಿ, ತಮ್ಮ ಮಕ್ಕಳ ಯಾವುದೇ ಅಕ್ಷಮ್ಯ ಕಾರ್ಯಗಳನ್ನು ಕ್ಷಮಿಸಿಬಿಡಲಿಲ್ಲ "ಮರಳಿ ಮಣ್ಣಿಗೆ"ಯ ಪಾರೋತಿ, ಸತ್ಯಭಾಮೆ, "ಕರುಳಿನ ಕರೆ"ಯ ಭಾಗೀರಥಿಯರು ನಗರಜೀವನದ ಆಧುನಿಕತೆಯ ಮೋಹಕ್ಕೆ ಒಳಗಾದ ಮಕ್ಕಳಿಂದ ಅವಗಣಿತರಾಗಿ ಮಾನಸಿಕವಾಗಿ ಬಳಲುತ್ತಾರೆ. ಆದರೆ "ಕರುಳಿನ ಕರೆ"ಯ ವೆಂಕಮ್ಮ, "ಇನ್ನೊಂದೇ ದಾರಿ"ಯ ಪದ್ಮಾವತಿ ಕೌಟುಂಬಿಕ ಹಾಗೂ ಆರ್ಥಿಕ ಕಾರಣಗಳಿಂದಾಗಿ ಮಕ್ಕಳಿಂದ ದೂರಾಗಿ ಸಂಕಟ ಪಡುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ಗಮನಕ್ಕೆ ಬರುವ ಇನ್ನೊಂದು ಮಹತ್ವದ ಅಂಶವೆಂದರೆ ಕೌಟುಂಬಿಕ ವಲಯದಲ್ಲಿ ಪತಿಗೆ ನಿಷ್ಠಳಾಗಿದ್ದೂ ಅವನಿಂದ ಅವಗಣನೆಗೆ ಒಳಗಾಗುವ ಹೆಣ್ಣು ಅವನಿಂದ ಹುಟ್ಟಿದ ತನ್ನ ಮಕ್ಕಳ ಅದರಕ್ಕೆ ಪಾತ್ರಳಾಗುತ್ತಾಳೆ. ಉದಾಹರಣೆಗೆ "ಮರಳಿ ಮಣ್ಣಿಗೆ"ಯ ನಾಗವೇಣಿ, ಪತಿ ಲಚ್ಚನ ಆಪ್ತ ಸ್ಥಾನಕ್ಕೆ ಸೇರದಿದ್ದರೂ ಮಗ ರಾಮ ಅವಳನ್ನು ಬಹಳ ಗೌರವಿಸುತ್ತಾನೆ. ಅಂತೆಯೇ "ಇನ್ನೊಂದೇ ದಾರಿ"ಯ ಹೊನ್ನಿ ಮಗ ಮಾದೇವನಿಂದ ಪ್ರೀತಿ ಪಡೆಯುತ್ತಾಳೆ. ಪತಿಯಿಂದ ಕಳೆದುಕೊಂಡುದನ್ನು ತಾಯಾಗಿ ಮಕ್ಕಳಿಂದ ಪಡೆಯುವುದು ಒಂದೆಡೆಯಾದರೆ, ನಾಗರಿಕತೆಯ ಸೋಗಿನೊಂದಿಗೆ ಪತಿಗೆ ನಿಷ್ಠಳಾಗಿ ಪಡೆದುಕೊಳ್ಳದ, "ಇದ್ದರೂ ಚಿಂತೆ"ಯ ಸಾವಿತ್ರಿಯಂತಹ ತಾಯಂದಿರು ಸೀತಾರಾಮನಂತಹ ಮಗನಿಂದ ತಿರಸ್ಕಾರಕ್ಕೊಳಗಾಗುತ್ತಾರೆ. ಇವು ಆದುನಿಕತೆ ಹಾಗೂ ಸಂಪ್ರದಾಯಗಳ ಬಗೆಗೆ,

ಅವುಗಳಲ್ಲಿ ಯಾವುದನ್ನು ಒಪ್ಪಿಕೊಳ್ಳಬೇಕು ಎಂಬ ಬಗೆಗೆ ಇರುವ ಕಾರಂತರ ಮನಸ್ಸಿನ ದ್ವಂದ್ವ ಅಥವಾ ಗೊಂದಲವನ್ನು ಪ್ರಕಟಿಸುತ್ತವೆ. ಅಲ್ಲದೆ ಪತಿಯ ಪ್ರೀತಿಯೇ ಬೇರೆ, ಮಗನದೇ ಬೇರೆ. ಅವುಗಳಲ್ಲಿ ಒಂದರ ಕೊರತೆಯನ್ನು ಇನ್ನೊಂದು ತುಂಬಲಾಗದು. ಹಾಗಾಗಿ ಕಾದಂಬರಿಗಳಲ್ಲಿ ಕಂಡುಬರುವ ಇಂತಹ ಸನ್ನಿವೇಶಗಳು ಕೇವಲ ಮಾನಸಿಕ ಸಮಾಧಾನ ಅಥವಾ ಹೊಂದಾಣಿಕೆಯ ಸಂಗತಿಗಳು ಮಾತ್ರ.

"ಇದ್ದರೂ ಚಿಂತೆ"ಯ ಸಾವಿತ್ರಿಯಂತಹ "ಅಳಿದ ಮೇಲೆ"ಯ ಕಮಲಳಂತಹ ತಾಯಿಯರು ಬದುಕಿನ ಸೂಕ್ಷ್ಮ ಸಂವೇದನೆಗಳಿಂದ ಹೊರತಾಗಿ ಬದುಕಿನ ಬಗ್ಗೆ ತಮ್ಮದೇ ಆದ ಸ್ವತಂತ್ರ ನಿಲುವನ್ನು ಹೊಂದಿದ್ದು ಹಣಕ್ಕೆ ಬೆಲೆಕೊಟ್ಟವರು. ಹೀಗಾಗಿ ಸಾವಿತ್ರಿಗೆ ಸೀತಾರಾಮನಂತಹ ಸೂಕ್ಷ್ಮ ಸಂವೇದನೆಗಳುಳ್ಳ ಮಗ ಅರ್ಥವಾಗುವುದೇ ಇಲ್ಲ, ಅವನ ಗೈರುಹಾಜರಿ ಅವಳನ್ನು ಕಾಡುವುದೇ ಇಲ್ಲ. ಬದಲಾಗಿ ಅವನನ್ನು ಹಿಡಿತದಲ್ಲಿರಿಸಿಕೊಳ್ಳಲಾಗದ ತನ್ನ ಅಸಹಾಯಕತೆ ಮಾತ್ರ ಅವಳಿಗೆ ಸಹಿಸಲಸಾಧ್ಯವಾಗುತ್ತದೆ.

ಈ ಎಲ್ಲ ತಾಯಂದಿರಿಗಿಂತ ಭಿನ್ನಳಾಗಿ ನಿಲ್ಲುವ "ಧರ್ಮರಾಯನ ಸಂಸಾರ"ದ ಮಹಾಲಕ್ಷ್ಮಿಯ ಮಾನಸಿಕ ಸಂಘರ್ಷದ ತುಮುಲಗಳೆಲ್ಲವೂ ಆಕೆ ಹೆಂಡತಿಯಾಗಿರುವಾಗ ವ್ಯಕ್ತವಾಗುವುದೇ ಇಲ್ಲ. ಪತ್ನಿಯಾಗಿ ಆಕೆ ಮೇಲ್ನೋಟಕ್ಕೆ ಸಂತೃಪ್ತೆ, ಆದರೆ ವಾಸ್ತವವಾಗಿ ಆಕೆ ಸಂತಪ್ತೆ ಎಂಬ ಅರಿವು ನಮಗಾಗುವುದು ಅವಳ ಮಗಳ ಬಾಳಿನ ನಿರ್ವಹಣೆಯ ಪ್ರಶ್ನೆ ಬಂದಾಗ ಮಾತ್ರ. ಮಾನಸಿಕವಾಗಿ ಏರಕವಾಗಿರದಿದ್ದ ತನ್ನ ಪತಿಗೆ ವೇಶ್ಯೆಯೊಬ್ಬಳ ಸಂಪರ್ಕವಿರುವ ವಿಷಯ ತಿಳಿದಾಗ ಕೂಡ ಆ ಕುರಿತು ನಿರ್ಲಿಪ್ತಳಾಗುವಷ್ಟು ಸಂಯಮ ತೋರಿದಂತೆ ಕಂಡುಬರುವ ಮಹಾಲಕ್ಷ್ಮಿ ತನ್ನ ಮಗಳ ಬಾಳಿನಲ್ಲಿ ಆಗುವ ಅನ್ಯಾಯವನ್ನು ಪ್ರತಿರೋಧಿಸಬೇಕೆಂಬ ನಿಲುವಿಗೆ ಕೊನೆಯ ಹಂತದಲ್ಲಿ ಬರುತ್ತಾಳೆ. ಇಂತಹ ಪ್ರತಿರೋಧಕ್ಕೆ ಕಾರಣ ಮತ್ತು ಅದರ ಹುಟ್ಟಿನ ಮೂಲ ಅವಳ ವಿವಾಹದ ಹೊಸತಿನಲ್ಲಿ ಅವಳ ಗಂಡ ಅವಳ ಜೊತೆ ನಡೆದುಕೊಳ್ಳುವ ಬಗೆಯಲ್ಲಿ, ಅನ್ಯಹೆಣ್ಣಿನ ಸಹವಾಸದ ಕಾರಣದಲ್ಲಿದೆ. ಇಂತಹ ಗಂಡನ ವರ್ತನೆಗೆ ತೋರುವ ಪರೋಕ್ಷವಾದ ಪ್ರತಿಭಟನೆಯೇ ಇದು. ಇದಕ್ಕೆ ಸಾಕ್ಷಿ ಆಕೆ ಮಗಳ ಮದುವೆಯ ನಾಲ್ಕನೆಯ ದಿನ ಸುಪ್ತಾವಸ್ಥೆಯಲ್ಲೆಂಬಂತೆ ಮೈಮೇಲೆ ದರ್ಶನ ಬಂದಂತೆ ವರ್ತಿಸಿ, ಮಗಳ ಮದುವೆ ಒಂದು ಪಾಪಕಾರ್ಯವಾದಂತಾಯಿತು ಎಂದು ಹೇಳುತ್ತಾಳೆ. ಆದರೆ ಆ ಉನ್ಮಾದಾವಸ್ಥೆಯಿಂದ ಹೊರಬರಂದ ಬಳಿಕ ಏನೊಂದೂ ತಿಳಿಯದಂತೆ ವರ್ತಿಸಿ, ಮಗಳನ್ನು ಆಶೀರ್ವದಿಸಿ ಕಳುಹಿಸುವ ಸನ್ನಿವೇಶ ಆಕೆಯ ಮಾನಸಿಕ ದೌರ್ಬಲ್ಯವನ್ನು ಸೂಚಿಸುತ್ತದೆ. ಮಂತ್ರವಾದಿಯ ಪೆಟ್ಟುಗಳಿಗೆ ಬೆದರಿ ಆಕೆಯ ಪ್ರತಿರೋಧ ಅಲ್ಲಿಗೇ ಮುರುಟಿಹೋಗುತ್ತದೆ. ಮುಂದೆಯೂ ಅನೇಕ ಬಾರಿ ಆಕೆ ಅದೇ ರೀತಿ ತನ್ನ ಪ್ರತಿರೋಧಕ್ಕೆ ಆಧಾರವಾಗಿ ಉನ್ಮಾದಕ್ಕೆ ಒಳಗಾಗುವ ಸಾಂಪ್ರದಾಯಿಕ ನಂಬಿಕೆಯನ್ನು ಬಳಸಿಕೊಳ್ಳಲು ಪ್ರಯತ್ನಿಸುತ್ತಾಳಾದರೂ, ಅದರಿಂದ ಏನನ್ನೂ ಅವಳಿಗೆ ಸಾಧಿಸಲಾಗುವುದಿಲ್ಲ.

ಅದೇ ರೀತಿ "ಕರುಳಿನ ಕರೆ"ಯ ಭಾಗೀರಥಿ ತನ್ನ ಪತಿಯೊಂದಿಗೆ ಇಳಿವಯಸ್ಸಿನಲ್ಲಿ ಸಂಬಂಧ ಕಳೆದುಕೊಳ್ಳಲು ಸಮಾರಾಧನೆಯ ಸಂದರ್ಭದಲ್ಲಿ ನಡೆದ ಘಟನೆಯೊಂದು ಕಾರಣವಾಗುತ್ತದೆ. ಅತೀ ಹತ್ತಿರದ ಬಡ ಸಂಬಂಧಿಕರ ಜೊತೆಗೆ ಕೂಡ ತನ್ನ ಸಿರಿವಂತಿಕೆಯ ಸ್ವಪ್ರತಿಷ್ಠೆಯನ್ನು ಮೆರೆಸುವಂತೆ ನಡೆದುಕೊಂಡು ಅವಮಾನಿಸುವ ತನ್ನ ಪತಿಯ ವರ್ತನೆಯು ಭಾಗೀರಥಿಯಲ್ಲಿ ಪತಿಯ ಕುರಿತು ಸುಪ್ತವಾಗಿದ್ದ ಅಸಮಾಧಾನದ ಶಿಖರ ಸ್ಥಿತಿಯಾಗಿ ಮಾರ್ಪಟ್ಟು, ಸ್ಫೋಟಗೊಳ್ಳುತ್ತದೆ. ಮುಂದೆ ಗಂಡನಿಂದ ದೂರಾಗಿ ಬದುಕುವ ದೃಢ ನಿರ್ಧಾರವನ್ನು ಕೈಗೊಂಡ ಸನ್ನಿವೇಶದಲ್ಲೂ ಆಕೆ ತನ್ನ ಮಕ್ಕಳ ಕುರಿತು ಸ್ತ್ರೀಸಹಜವಾದ ಅಭಿಲಾಷೆಗಳನ್ನು ಇರಿಸಿಕೊಳ್ಳುತ್ತಾಳೆ ಮತ್ತು ಅದರಲ್ಲಿ ಹೆಚ್ಚು ಸೋಲನ್ನೇ ಕಾಣುವಂತಾಗುತ್ತಾಳೆ.

"ಇನ್ನೊಂದೇ ದಾರಿ"ಯ ಪದ್ಮಾವತಿ ಹೊಟ್ಟೆಪಾಡಿಗಾಗಿ ಒದಗಿಬಂದ ಅಸಹಾಯಕತೆಯ ನಿಮಿತ್ತ ತನ್ನ ಒಬ್ಬ ಮಗನನ್ನು ದತ್ತಕಕ್ಕೆ ಕೊಟ್ಟು ಸಂಪೂರ್ಣ ಮರೆತೇಬಿಡಬೇಕಾಗಿ ಬಂದ ಪ್ರಸಂಗದಲ್ಲಿ ಆಕೆಗಾಗಿರಲೇಬಹುದಾದ ಮಾನಸಿಕ ವಿಪ್ಲವದ ವಿಶೇಷ ಸೂಚನೆಗಳು ಆ ಕಾದಂಬರಿಯಲಿಲ್ಲ. ಈ ಕೊರತೆಯನ್ನು ತುಂಬುವಂತೆ ಹೊನ್ನಮ್ಮನಂತಹ ತಾಯಿಯ ಪಾತ್ರವನ್ನೇ ಉಜ್ವಲವಾಗಿಸಿ ಆಕೆಯ ವ್ಯಕ್ತಿತ್ವವನ್ನು ಬೆಳಗಿದೆ ಈ ಕಾದಂಬರಿ. ಹಾಗಾಗಿ ನರಸಿಂಹನನ್ನು ದತ್ತಕಕ್ಕೆ ಕೊಟ್ಟ ನೋವನ್ನು ಅಜ್ಜಿ ಹೊನ್ನಮ್ಮನೇ ಹೆಚ್ಚು ಅನುಭವಿಸುವಂತೆ ಕಾಣುತ್ತದೆ. ಮತ್ತು ಆಕೆ ಸಂಪರ್ಕವೇ ಇಲ್ಲದ ಮೊಮ್ಮಗನನ್ನು ಕಡೆಗಾಲದಲ್ಲಿ ಕಾಣುವಂತಾಗಿ ಅವನ ಕೈಯ್ಯ ನೀರು ಕುಡಿದೇ ಕೊನೆಯುಸಿರೆಳೆಯಬೇಕೆಂದು ಕಾದ

ಇಚ್ಛಾಮರಣಿಯಾಗುವುದು ಇದರ ವಿಶೇಷ. ತಾಯಿ ಪದ್ಮಾವತಿಗೂ ಮುಪ್ಪಿನ ಕಾಲದಲ್ಲಿ ಮಗನ ಭೇಟಿಯಾದಾಗ ಆಗುವ ಸಂತೋಷವನ್ನು ಕಾದಂಬರಿ ಅಷ್ಟೇನೂ ವ್ಯಕ್ತಪಡಿಸುವುದಿಲ್ಲ.

ತಾಯ್ತನ, ವಾತ್ಸಲ್ಯ ಈ ಎಲ್ಲ ಪದಗಳು ತಾಯಿಯಾದ ಹೆಣ್ಣಿನಲ್ಲಿ ಇರಲೇಬೇಕಾದ ಸಂವೇದನೆಗಳು ಎಂದು ಭಾವಿಸಲಾಗಿದೆಯಾದರೂ ಈ ಸಂವೇದನೆಗಳನ್ನೊಳಗೊಂಡ ಪುರುಷರೂ ಮತ್ತು ಇದಕ್ಕೆ ಹೊರತಾದ ಸ್ತ್ರೀಯರು ಇಲ್ಲವೆಂದಿಲ್ಲ. "ಮೈಮನಗಳ ಸುಳಿಯಲ್ಲಿ"ನ ಶಾರಿ ತನ್ನ ಮಗಳೂ ಚಂದ್ರಿ ತನ್ನಂತೆಯೇ ವ್ಯವಹಾರಶೀಲೆಯಾಗಿರಬೇಕೆಂದು ಬಯಸುವವಳೇ ಹೊರತು ಸಂಭಾವಿತ ಗೃಹಿಣಿಯಾಗಬೇಕೆಂದಲ್ಲ. ಈ ಗುಣ ಅವಳ ವೃತ್ತಿಗೆ ಸಹಜವಾಗಿರಬಹುದಾದರೂ ಇದೇ ವೃತ್ತಿಯಲ್ಲಿದ್ದು ಸಂಪೂರ್ಣ ವ್ಯತಿರಿಕ್ತವಾದ ಧೋರಣೆಯನ್ನು ತೋರುವ ತಾಯಂದಿರೂ ಅನೇಕ ಕಾದಂಬರಿಗಳಲ್ಲಿ ಕಾಣಸಿಗುತ್ತಾರೆ. "ಇದ್ದರೂ ಚಿಂತೆ"ಯ ಚಂಪೆ ತನ್ನ ವಿವಾಹಬಾಹಿರ ಪ್ರಣಯಜೀವನಕ್ಕಾಗಿ ಹೆತ್ತಮಗುವನ್ನೇ ದಿಕ್ಕಾಗೇಡಿಯಾಗಿಸಿ ದೂರಹೋಗುವಷ್ಟು ನಿರ್ದಯಿಯಾದರೆ, "ಒಡಹುಟ್ಟಿದವರು" ವಿನ ಶೇವಂತಿ ತನ್ನ ಸಭ್ಯ ಗಂಡನ ಜೊತೆಗಿನ ಸ್ವಪ್ರತಿಷ್ಠೆಯ ಅನಗತ್ಯ ಹೋರಾಟದಲ್ಲಿ ತಂದೆಯಲ್ಲದೆ ನಲುಗುವ ಮಗುವಿಗಾಗುವ ಅನ್ಯಾಯವನ್ನು ಒಂದು ಹಂತದವರೆಗೆ ಕಡೆಗಣಿಸುವಾಕೆ. ವೇಶ್ಯಾಸಮುದಾಯದಿಂದ ಬಂದ ವಿದ್ಯಾವಂತೆ ವಿನತೆ ತನ್ನ ಪತಿಯ ಮೊದಲ ಪತ್ನಿಯ ಮಕ್ಕಳನ್ನೇ ತನ್ನವೆಂದು ಗಾಢವಾಗಿ ಪ್ರೀತಿಸುತ್ತಾಳೆ. ಅದೇ ಕಾದಂಬರಿ "ಬತ್ತದ ತೊರೆ"ಯ ಮಂಜುಳೆ ಹೆಣ್ಣಾದ ತಾನು ತಾಯಾಗದೆ ಸಾಯಲಾರೆ, ತಾನು ಅದಕ್ಕಾಗಿಯೇ ಹುಟ್ಟಿದವಳು ಎಂದು ರೋಧಿಸಿದಾಗ ವಿನತೆ ಆ ಭಾಗ್ಯ ಅವಳಿಗೆ ಮುಂದಾದರೂ ದೊರಕೀತೆಂದು ಹೇಳಿ ಸಂತೈಸುವುದರಲ್ಲಿ ಕಾರಂತರು ತಾಯ್ತನದ ಮಹತ್ವವನ್ನು ಎತ್ತಿಹಿಡಿದಿರುವುದನ್ನು ಕಾಣಬಹುದಾಗಿದೆ.

ಆಧುನಿಕ ನಗರಜೀವನಕ್ಕೆ ಮಾರುಹೋದ "ಬೆಟ್ಟದ ಜೀವ"ದ ಶಂಭುವಿನಂತಹ ಮಕ್ಕಳು ತಾಯಿಯ ಬಳಿಗೆ ಮರಳುವುದಿಲ್ಲ. ಆದರೆ ಅನಿವಾರ್ಯ ಕಾರಣಗಳಿಗೆ ದೂರಾದ "ಇನ್ನೊಂದೇ ದಾರಿ"ಯ ನರಸಿಂಹ, "ಕರುಳಿನ ಕರೆ"ಯ ಲಕ್ಷ್ಮಣರಂತಹ ಮಗಂದಿರು ದೀರ್ಘಕಾಲದ ವಿರಹದ ನೋವನ್ನು ನಿವಾರಿಸಿ ಮರೆಸುವಂತೆ, ಸುದೀರ್ಘ ಕಷ್ಟಪರಂಪರೆಗಳಿಗೆ ವಿದಾಯ ಹೇಳುವಂತೆ ತಾಯಿಯ ಬಳಿಗೆ ಮರಳಿ ಅವರ ಮುಪ್ಪಿನ ಕಾಲದಲ್ಲಿ ಬಳಿಯಿದ್ದು ಸಂತೋಷ ನೀಡುತ್ತಾರೆ.

ಒಟ್ಟಾರೆಯಾಗಿ ಸ್ವಾತಂತ್ರ್ಯೋತ್ತರ ಮತ್ತು ಸ್ವಾತಂತ್ರ್ಯಪೂರ್ವದ ನಿಕಟ ಕಾಲಘಟ್ಟದಲ್ಲಿ ಕಾರಂತರ ಸ್ತ್ರೀಪರವಾದ ಅದರಲ್ಲೂ ವೇಶ್ಯೆಯರ, ವಿಧವೆಯರ, ಪತಿಯಿಂದ ಪರಿತ್ಯಕ್ತರಾದ ಮಹಿಳೆಯರ ಪರವಾದ ಕಾಳಜಿಯು ಅತ್ಯಂತ ಮೌಲಿಕ ಹಾಗೂ ಅರ್ಥಪೂರ್ಣವಾದುದು. ಅಂದಿನ ಎಲ್ಲ ಬಗೆಯ ಶೋಷಿತ ಮಹಿಳೆಯರ ವಿಭಿನ್ನ ಕೌಟುಂಬಿಕ ಹಾಗೂ ಸಾಮಾಜಿಕ ಸಂವೇದನೆಗಳನ್ನು ಅವರು ಕಾದಂಬರಿಗಳಲ್ಲಿ ಗ್ರಹಿಸಿದ ಮತ್ತು ನಿರ್ವಹಿಸಿದ ರೀತಿ ಅನನ್ಯವಾದುದು. ಪುರುಷಪ್ರಧಾನವಾದ ಸಮಾಜವು ಕೌಟುಂಬಿಕ ಚೌಕಟ್ಟಿನಲ್ಲಿ ರೂಪಿಸಿದ ಮಹಿಳೆಯ ಕುರಿತಾದ ಸಿದ್ಧಗ್ರಹಿಕೆಗಳ ಬುಡವನ್ನು ಅಲುಗಾಡಿಸಿದವರು ಕಾರಂತರು. ಇಂತಹ ಗ್ರಹಿಕೆಗಳು, ಅವುಗಳ ನೆಲೆಗಳು ಮತ್ತು ಅವುಗಳು ಎಷ್ಟರಮಟ್ಟಿಗೆ ಸಮಂಜಸವಾದವು ಎಂಬುದರ ವಿಶ್ಲೇಷಣೆಯಲ್ಲಿ ಅವು ಜೀವ - ಜೀವನಪರವಾಗಿರಬೇಕೆಂಬ ಕಳಕಳಿ ಕಾರಂತರ ಕಾದಂಬರಿಗಳಲ್ಲಿ ಬಹಳ ಸಹಜವಾಗಿ ಮತ್ತು ಸ್ಪಷ್ಟವಾಗಿ ಗೋಚರಿಸುತ್ತವೆ.

ಮಾನವೀಯತೆಯೇ ಗೌಣವಾಗಿ ಮಾನವೀಯ ಮೌಲ್ಯಗಳು ಅವನತಿಯೆಡೆಗೆ ಸಾಗುತ್ತಿರುವ ಪ್ರಸಕ್ತ ಸಾಮಾಜಿಕ ರಾಜಕೀಯ ಸಂದರ್ಭದಲ್ಲಿ ಶಿವರಾಮ ಕಾರಂತರಂತಹ ಸಂವೇದನಾಶೀಲರಾದ ನಮ್ಮ ಹಿರಿಯರು ಎತ್ತಿಹಿಡಿದಿರುವ ಜೀವನಪ್ರೀತಿಯನ್ನು, ಮೌಲ್ಯ ರಕ್ಷಣೆಯ ಕಳಕಳಿಯನ್ನು ಸಾಹಿತ್ಯದಲ್ಲಿ ಗುರುತಿಸುವ ಮೂಲಕವಾದರೂ ನಮ್ಮಲ್ಲಿ ವೈಚಾರಿಕತೆಯನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬಹುದೇನೋ?

**ಡಾ. ಶೈಲಾ. ಯು**
ಸಂಶೋಧನ ಸಹಾಯಕರು
ಡಾ. ಕೆ. ಶಿವರಾಮ ಕಾರಂತ ಪೀಠ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ : 574199
ದೂರವಾಣಿ : 0824 228791 (ಮನೆ)
2287592 (ಕಚೇರಿ).

# ಅಡುಗೆ ಮಾಡುವುದು ನನಗೆ ಇಷ್ಟ - ಮುಲ್ಕರಾಜ್ ಆನಂದ್

ಭಾರತೀಯರು ಇಂಗ್ಲಿಷ್ ಭಾಷೆಯಲ್ಲಿ ಬರೆದು ಪ್ರಖ್ಯಾತರಾದವರಲ್ಲಿ ಮುಲ್ಕರಾಜ್ ಆನಂದರವರು ಒಬ್ಬರು. ಅವರು ಬರೆದ ಹಲವಾರು ಖ್ಯಾತ ಕಾದಂಬರಿಗಳಲ್ಲಿ 'ಅನ್‌ಟಚಬಲ್' ಒಂದು ಜನಪ್ರಿಯ ಕಾದಂಬರಿ. ಮುಲ್ಕರಾಜ್ ಆನಂದ ಇತ್ತೀಚೆಗೆ ನಿಧನರಾದರು.

ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯ ಬೋಧಿಸುತ್ತಿದ್ದ ಪ್ರೊ. ಡಿ.ವಿ. ಶಂಕರ್ ಇತ್ತೀಚೆಗೆ ಅವರನ್ನು ಕುರಿತು ಪ್ರಜಾವಾಣಿಯಲ್ಲಿ ಒಂದು ಲೇಖನವನ್ನು ಬರೆದಿದ್ದರು. ಆ ಲೇಖನದಲ್ಲಿ ಶಂಕರ್‌ರವರು, ಮುಲ್ಕರಾಜ್ ಆನಂದರವರನ್ನು ನೀವೇಕೆ ಬರೆಯುತ್ತೀರಿ ಎಂಬ ಪ್ರಶ್ನೆಯನ್ನು ಕೇಳಿದ್ದರು. ಈ ಪ್ರಶ್ನೆಗೆ ಆನಂದರವರು ನೀಡಿದ ಉತ್ತರ ತುಂಬಾ ಅಚ್ಚರಿಯನ್ನು ಉಂಟು ಮಾಡಿತು. "ನನಗೆ ಬರೆಯಬೇಕು ಅನಿಸುತ್ತೆ, ಅದಕ್ಕೆ ಬರೆಯುತ್ತೇನೆ ಗಾಢವಾಗಿ ಅನಿಸಿದ್ದನ್ನು ಹೇಳಬೇಕು ಅನ್ನಿಸುತ್ತೆ. ಸಂತೋಷ ಕೊಡುವುದನ್ನು ಸೃಷ್ಟಿಸುವುದು ನನಗೆ ಇಷ್ಟ. ಅದಕ್ಕೆ ಬರೆಯುತ್ತೇನೆ. ನನಗೆ ಅಡುಗೆ ಮಾಡುವುದು ಇಷ್ಟ. ಅದಕ್ಕೆಂದೆ ನಾನು ಅಡುಗೆ ಮಾಡುವ ಕ್ರಮವನ್ನು ತಿಂಡಿ - ತಿನಿಸು ತಯಾರಿಸುವ ವಿಧಾನವನ್ನು ಕುರಿತು ಪುಸ್ತಕ ಬರೆಯುತ್ತೇನೆ" ಎಂದಿದ್ದಾರೆ.

ಮುಲ್ಕರಾಜ್ ಆನಂದರವರ ಈ ಅಭಿಪ್ರಾಯವನ್ನು ಓದಿದಾಗ ತುಂಬಾ ಅಚ್ಚರಿಯಾಯಿತು. ನಮ್ಮ ಇಂದಿನ ಪುರುಷ ಪ್ರಧಾನ ಸಮಾಜದಲ್ಲಿ ಖ್ಯಾತ ಪುರುಷ ಲೇಖಕರೊಬ್ಬರು ಹೇಳಿರುವ ಈ ಮಾತು ಅದರ ಮುಕ್ತ ಮನಸ್ಸಿನ ಅಭಿವ್ಯಕ್ತಿಯಾಗಿದೆ. ಅಡುಗೆ ಮಾಡುವ ಕ್ರಿಯೆಯನ್ನು ಅವರು ಸೃಜನಾತ್ಮಕ ಬರವಣಿಗೆಯೊಂದಿಗೆ ಹೋಲಿಸಿರುವುದು ಮನೆಗೆಲಸ, ಅಡುಗೆ ಕೆಲಸದ ಮೌಲ್ಯವನ್ನು ಹೆಚ್ಚಿಸಿದಂತೆನಿಸಿತು.

ಗಂಡಸರು ಹೊರಗಿನಿಂದ ಮನೆಯೊಳಗೆ ಪ್ರವೇಶಿಸುತ್ತಲೇ ಬಟ್ಟೆ ಬದಲಾಯಿಸಿಕೊಂಡು ಬರುತ್ತಲೇ ಹೆಂಗಸರು ತಮ್ಮ ಕಾಯಕವೆಂಬಂತೆ, ತಟ್ಟೆ ತೊಳೆದು ಬಿಸಿ ಬಿಸಿ ಊಟ ಬಡಿಸಿ ನಂತರ ತಟ್ಟೆ ತೊಳೆಯುವ ಪರಂಪರೆ ನಮ್ಮ ದೈನಂದಿನ ಜೀವನದಲ್ಲಿ ಬೇರು ಬಿಟ್ಟಿದೆ. ಅಡುಗೆ ಮಾಡುವುದಿರಲಿ, ಮಾಡಿರುವುದನ್ನು ತಟ್ಟೆಗೆ ಹಾಕಿಕೊಂಡು ಊಟ ಮಾಡುವುದು ಸಹ ಅವಮಾನಕರ ಎಂಬ ಭಾವನೆ ನಮ್ಮ ನಡುವಿರುವ ಪುರುಷರಲ್ಲಿದೆ. ಅಡುಗೆ ಮಾಡಿ ಬಡಿಸುವುದರಲ್ಲಿ ಹೆಂಗಸರು ಸಂತೋಷ ನೆಮ್ಮದಿ, ಸಂತೃಪ್ತಿ ಭಾವನೆಯಿಂದ ಬೀಗಬೇಕು. ಅವಳ ಪ್ರೀತಿ, ಆತ್ಮೀಯತೆ, ಅಕ್ಕರೆ ಎಲ್ಲವೂ ಅವಳ ಈ ಕರ್ತವ್ಯದಲ್ಲಿಯೇ ವ್ಯಕ್ತವಾಗಬೇಕು. ಹಾಗಿಲ್ಲದಿದ್ದರೆ ಆಕೆ ಹೆಂಗಸೇ ಅಲ್ಲ.

ಮನೆಗೆಲಸ ಮಾಡುವುದು, ಅಡುಗೆ ಮಾಡುವುದು ಕೀಳು ಎಂಬ ಭಾವನೆ ಗಂಡಸರಲ್ಲೂ, ಹಾಗೆ ಹೆಂಗಸರಲ್ಲೂ ಬೇರೂರಿದೆ. ಹೆಂಗಸರು ಹುಟ್ಟಿರುವುದೇ ಅಡುಗೆ ಕೆಲಸ ಮಾಡುವುದಕ್ಕೆ ಎಂಬಂತಹ ಧೋರಣೆಯಿಂದ ಅದಕ್ಕೆ ಕೀಳುತನವನ್ನೂ ಆರೋಪಿಸಲಾಗಿದೆಯೆ? ಹಳ್ಳಿಯ ಒಬ್ಬ ಅಜ್ಜಿ "ಹೆಣ್ಣು ಮಕ್ಕಳನ್ನು ಎಷ್ಟು ಓದಿಸಿದರೂ ಮಡಿಕೆ ಗೀಚೋದು ತಪ್ಪೋದಿಲ್ವಲ್ಲಾ" ಹೇಳಿದ್ದ ಸಿನಿಕತನದಿಂದ ಅಂದುಕೊಂಡರು ವಾಸ್ತವ ಪರಿಸ್ಥಿತಿಯನ್ನು ಆಕೆ ಹೇಳಿದ್ದಳು. ಕೆಲಸಕ್ಕೆ ಹೋಗುವ ಹೆಂಗಸರ ಪಾಡಂತು ವರ್ಣಿಸಲಸಾಧ್ಯ. ಬೆಳಿಗ್ಗೆ ಗಂಡ ವಾಕಿಂಗ್ ಹೋಗಿ ಬಂದು, ಪತ್ರಿಕೆ ಓದಿ ಮುಗಿಸುವುದರಲ್ಲಿ ಒಂದೇ ಉಸಿರಿನಲ್ಲಿ ತಿಂಡಿ, ಅಡಿಗೆ ಎಲ್ಲಾ ತಯಾರು ಮಾಡಿ ಡಬ್ಬಿಗಳಿಗೆ ತುಂಬಿ ಮಕ್ಕಳನ್ನು ಶಾಲೆಗೆ ರೆಡಿಮಾಡಿ ತಾನು ರೆಡಿಯಾಗಿ ಹೊರಡಬೇಕು. ಈ ಪುರುಷ ಮಹಾಶಯ ವಾಕಿಂಗ್ ಹೋಗಿ ಬಂದು ಸ್ನಾನ ಮಾಡಿ, ತಟ್ಟೆಯಲ್ಲಿರುವ ಬಿಸಿ ಬಿಸಿ ತಿಂಡಿ ತಿಂದು ಹೊರಡುವುದೇ ಒಂದು ದೊಡ್ಡ ಕೆಲಸ.

ಹೀಗೆಂದ ಮಾತ್ರಕ್ಕೆ ಎಲ್ಲ ಗಂಡಸರು ಹೀಗೆ ಎಂದು ಹೇಳಲಾಗುವುದಿಲ್ಲ ಮಾನವೀಯತೆಯುಳ್ಳ ಪುರುಷರು ಮನೆಯಲ್ಲಿನ ಹೆಂಗಸರಿಗೆ ನೆರವಾಗುವವರು ಇದ್ದಾರೆ. ಆದರೆ ಇವರಿಗೆ ಸಮಾಜದಲ್ಲಿ ಮನ್ನಣೆ ಸಿಗುವುದಕ್ಕಿಂತ ಹೆಂಡತಿಯ ದಾಸ, ಗುಲಾಮ ಅಥವಾ ಹೆಂಡತಿ ಗಂಡನನ್ನು ಹೆದರಿಸಿ ಇಟ್ಟುಕೊಂಡಿದ್ದಾಳೆ, ಕಂಟ್ರೋಲ್ ಮಾಡ್ತಾಳೆ ಅಂತ ಆರೋಪಿಸಲಾಗುತ್ತದೆ.

ಒಬ್ಬ ಸೃಜನಾತ್ಮಕ ಲೇಖಕ ಅಡುಗೆ ಮಾಡುವುದು ನನಗೆ ಇಷ್ಟ ಎಂದು ಸಾರ್ವಜನಿಕವಾಗಿ ಹೇಳಿರುವುದು ಅವರ ಅಹಂಕಾರವಿಲ್ಲದ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಸೃಜನಾತ್ಮಕತೆಯುಳ್ಳ ಪುರುಷಾಹಂಕಾರವಿಲ್ಲದ ಮುಕ್ತ ಮನಸ್ಸು ಭಾರತೀಯ ಸಮಾಜದಲ್ಲಿ ಬಹು ಅಪರೂಪವಾಗಿದೆ. ಸೃಜನಾತ್ಮಕತೆ, ಸಂತೋಷ ಕೊಡುವುದನ್ನು ಎಲ್ಲದರಲ್ಲಿಯೂ ಸಾಧ್ಯವೆನ್ನುವುದನ್ನು - ಅಡುಗೆ ಮಾಡುವ ಕ್ರಿಯೆಗೆ ಹೋಲಿಸಿರುವುದನ್ನು ನೋಡಬಹುದು. ಪುರುಷರು ಮುಕ್ತ ಮನಸ್ಸಿನಿಂದ ಆಯ್ಕೆ ಮಾಡಿಕೊಳ್ಳುವ, ಹೆಂಗಸರು ಆಯ್ಕೆ ಮಾಡಿಕೊಳ್ಳಲು ಸಾಧ್ಯತೆಯಿರುವ ವಾತಾವರಣ ಸೃಷ್ಟಿಯಾದರೆ ಸೃಜನಾತ್ಮಕತೆಯ ಹರವು ಎಷ್ಟು ವಿಸ್ತಾರವಾಗುತ್ತಿತ್ತು ?

ರಾಜೇಶ್ವರಿ ಎಚ್. ಎಸ್.

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ.**

**ಸಂಸ್ಥೆಗಳಿಗೆ : 150 ರೂ.**

ಸಂ. ಮಂಡಳಿ

**REGD NO. : CPMG/KA/BGE/289/2003-05**

**BOOK-POST**
**PRINTED MATTER**

ವಿಳಾಸ :

**ಮಾನಸ**

**ಪಂಚಾಯಿತಿ ರಸ್ತೆ, ಕಾಡುಗೋಡಿ**

**ಬೆಂಗಳೂರು - 560 067.**